## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ-ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನ ಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮ [illegible] ಜನಸಾಮಾನ್ಯರ ತಿಳಿವನ್ನು ಉತ್ತಮ ಗೊ [illegible] ೊತ್ತಿಗೆಗಳು ಸಹಕಾರಿಯಾಗಲೆಂದು [illegible] ನೆ.

**ಟಿ. ಕೆ. ತುಕೋಳ್**

ಉಪಕುಲಪತಿ

## ಅರಿಕೆ

ಸುಮಾರು ಒಂದು ವರ್ಷದ ಹಿಂದೆ ಬೆಂಗಳೂರು ವಿಶ್ವ ವಿದ್ಯಾಲಯದ ವತಿಯಿಂದ ದೇವನೂರಿನಲ್ಲಿ ಲಕ್ಷ್ಮೀಶ ಕವಿಯ ನಾಲ್ಕನೆಯ ಶತಮಾನೋತ್ಸವದಲ್ಲಿ ನಾನು ಮಾತಾಡಿದ್ದೆ. ಅನಂತರ ಈ ವಿಶ್ವವಿದ್ಯಾಲಯದ ಪ್ರಕಟಣ ಶಾಖೆಯ ಸಂಘಟಕರಾದ ಶ್ರೀ ಕೆ. ಸಿ. ಶಿವಪ್ಪನವರು ನಾನು ಮಾತಾಡಿದ್ದನ್ನು ಬರೆದು ಕೊಡುವಂತೆ ಮತ್ತೆ ಮತ್ತೆ ಒತ್ತಾಯ ಮಾಡಿದರು. ಅವರ ಅಭಿಮಾನಪೂರ್ವಕ ಒತ್ತಾಯದಿಂದ ಮಾತ್ರವೇ ಈಗ ಈ ರೂಪ ದಲ್ಲಿ ಕೃತಿ ಹೊರಬರುತ್ತಿದೆ. ಅವರಿಗೆ ಹೃತ್ಪೂರ್ವಕವಾದ ವಂದನೆ ಗಳು. ಬೆಂಗಳೂರು ವಿಶ್ವವಿದ್ಯಾಲಯವನ್ನು ಪ್ರತಿನಿಧಿಸಲು ಆಹ್ವಾನಿಸಿ ಅವಕಾಶ ಮಾಡಿಕೊಟ್ಟವರು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಜಿ. ಎಸ್. ಶಿವರುದ್ರಪ್ಪನವರು. ಅವರಿಗೂ ನನ್ನ ವಿನಮ್ರ ವಂದನೆಗಳು.

ಈ ಕೃತಿ ರಚಿತವಾಗಿರುವುದು ಜನಸಾಮಾನ್ಯರಿಗೇ ಆದರೂ ಜೈಮಿನಿ ಭಾರತವನ್ನು ಕನ್ನಡಕ್ಕೆ ತರುವಲ್ಲಿ ಲಕ್ಷ್ಮೀಶನ ವೈಶಿಷ್ಟ್ಯ ವೇನು ಎಂಬುದರ ಕಡೆಗೆ ಹೆಚ್ಚು ಗಮನ ಹರಿಸಲಾಗಿದೆ; ಸೀತಾ ವನವಾಸವನ್ನು ಕುರಿತ ತೌಲನಿಕ ಅಭ್ಯಾಸ ಈ ದೃಷ್ಟಿಯಿಂದ ನಡೆ ಸಿದ್ದಾಗಿದೆ. ಉದಾಹರಣೆಗಳನ್ನು ಮೈಸೂರು ಸರ್ಕಾರದಿಂದ ಪ್ರಕಟವಾಗಿರುವ ಕನ್ನಡ ಜೈಮಿನಿ ಭಾರತದಿಂದಲೂ ಗೀತಾ ಪ್ರೆಸ್‌ನಿಂದ ಪ್ರಕಟವಾಗಿರುವ ಸಂಸ್ಕೃತ ಜೈಮಿನಿಯಿಂದಲೂ ಬಳಸಿ ಕೊಳ್ಳಲಾಗಿದೆ.

**ಜಿ. ಎಸ್. ಸಿದ್ಧಲಿಂಗಯ್ಯ**

## ಪರಿವಿಡಿ

# 1. ಹಿನ್ನೆಲೆ

ನಮ್ಮ ನಾಡಿನ ಜನಪ್ರಿಯ ಕವಿಗಳಲ್ಲಿ ಲಕ್ಷ್ಮೀಶನೊಬ್ಬನು. ಹಳ್ಳಿಯಕಡೆ ಇಂದಿಗೂ ಜನ ಮಾತನಾಡುವಾಗ ಒಬ್ಬ ಮನುಷ್ಯನ ವಿದ್ವತ್ತನ್ನು ಅಳೆಯಬೇಕಾದರೆ ಕೇಳುವ ಪ್ರಶ್ನೆ; 'ನಿಮಗೆ ಜೈಮಿನಿ ಆಗಿದೆಯೇ; ರಾಜಶೇಖರವಿಳಾಸ ಆಗಿದೆಯೇ ಅಥವಾ ಕುಮಾರ ವ್ಯಾಸ ಭಾರತ ಆಗಿದೆಯೇ' ಎಂದು. ಒಬ್ಬ ವ್ಯಕ್ತಿಯ ಕಾವ್ಯಾ ಭ್ಯಾಸದ ಮಟ್ಟವನ್ನು ಅಳೆಯಲು ನಮ್ಮ ಜನ ಬಳಸುತ್ತಿದ್ದ ಅಳತೆಗೋಲುಗಳು ಇವು. ಎಷ್ಟೋ ವೇಳೆ ಈ ಕಾವ್ಯಗಳನ್ನು ಅಭ್ಯಾಸ ಮಾಡಿದ್ದವರು ಅನಕ್ಷರಸ್ಥರೆಂದರೆ ನಮಗೆ ಅಚ್ಚರಿಯಾಗ ಬಹುದು. ಆದರೆ ಹಳ್ಳಿಯ ಚಾವಡಿಗಳಲ್ಲೊ, ದೇವಸ್ಥಾನದ ಮಂಟಪಗಳಲ್ಲೊ ಅಥವಾ ಅರಳೀಕಟ್ಟೆಯ ಮೇಲೊ ಕುಳಿತು ಒಬ್ಬನು ರಾಗವಾಗಿ ಹಾಡಿ ಮತ್ತೊಬ್ಬನು ಅದನ್ನು ಕಲಿಯುವ ರೂಢಿ ಒಂದಿತ್ತು. ನಮ್ಮ ಹಳ್ಳಿಯ ಜನರ ಶ್ರುತಿಗಳೆಂದರೆ ಇಂಥ ಕಾವ್ಯಗಳು ಮತ್ತು ಜನಪದ ಗೀತೆಗಳಾಗಿದ್ದುವು. ಮೇಲೆ ಹೇಳಿದ ಮೂರು ಕಾವ್ಯಗಳೂ ಪಂಡಿತ ಪಾಮರ ರಂಜಕವಾಗಿದ್ದುವು. ಕುಮಾರವ್ಯಾಸ ಭಾರತವಾದ ಮೇಲೆ ಜನಪ್ರಿಯತೆಯ ಎರಡನೆಯ ಪಟ್ಟ ಲಕ್ಷ್ಮೀಶ ಕವಿಯ ಜೈಮಿನಿ ಭಾರತಕ್ಕೇ ಮೀಸಲು ಎನ್ನ ಬೇಕು. ಹೀಗಾಗಿ ಲಕ್ಷ್ಮೀಶನು ಜನತೆಯ ಪ್ರಿಯಕವಿಯಾಗಿದ್ದಾನೆ. ಈತನ ಜನಪ್ರಿಯತೆಗೆ ಪ್ರಧಾನವಾಗಿ ಕಾರಣಗಳು ಎರಡು. ಒಂದನೆಯದು ಈತನ ಷಟ್ಪದಿಗಳ ತುಂಬುನಾದಮಯತೆ. ಇದ ರಲ್ಲಿರುವ ಗೇಯತೆ ಅನೇಕ ಗಮಕಿಗಳ ಹೃದಯವನ್ನು ಗೆದ್ದಿದೆ. ಎರಡನೆಯದು ಈ ಕಾವ್ಯದಲ್ಲಿ ಬರುವ ಕಥೆಗಳ ವೈವಿಧ್ಯ. ಚಂಡಿ ಯಂಥ ಹಟಮಾರಿಯಿಂದ ಹಿಡಿದು ಚಂದ್ರಹಾಸನಂಥ ಮುಗ್ಧ ಅದೃಷ್ಟಶಾಲೀ ಹರಿಭಕ್ತನವರೆಗೆ ವೈವಿಧ್ಯಮಯವಾಗಿರುವ ಈ

ಕೃತಿಯ ಕಥೆಗಳು ಜನರ ಕಲ್ಪನೆಗಳನ್ನು ಅರಳಿಸಿವೆ. ಈ ಕೃತಿಯು ಪ್ರಧಾನವಾಗಿ ಅಶ್ವಮೇಧಯಾಗವನ್ನು ಕುರಿತುದೇ ಆಗಿದ್ದರೂ ಇದರೊಳಗೆ ಹಾಸುಹೊಕ್ಕಾಗಿ ಸೇರಿಕೊಂಡಿರುವ ವಿಪುಲವಾದ ಸುಂದರ ಕಥೆಗಳು ಜೈಮಿನಿ ಭಾರತವನ್ನು ಕಥೆಗಳ ಉಗ್ರಾಣವಾಗಿ ಮಾಡಿವೆ. ಇಂಥ ಜೈಮಿನಿ ಭಾರತವನ್ನು ಕನ್ನಡದಲ್ಲಿ ಲಕ್ಷ್ಮೀಶ ಬರೆದಿದ್ದಾನೆ. ಲಕ್ಷ್ಮೀಶನು ಸಂಸ್ಕೃತದ ಜೈಮಿನಿಯ ಅಶ್ವಮೇಧ ಯಾಗದ ಕಥೆಯನ್ನುಳ್ಳ ಭಾರತ ಕಥೆಯನ್ನು ಕನ್ನಡ ಕವಿಗಳ ಪರಂಪರೆಯಂತೆಯೆ ಬಹಳ ಸೊಗಸಾಗಿ ಕನ್ನಡದಲ್ಲಿ ರಚಿಸಿದ್ದಾನೆ. ಹೀಗೆ ಮೂಲಸಂಸ್ಕೃತ ಕಾವ್ಯವನ್ನು ಕನ್ನಡಕ್ಕೆ ತರುವಾಗ ತನ್ನ ಸ್ವಂತ ಪ್ರತಿಭೆಯನ್ನು ಗಣನೀಯವಾಗಿ ಮೆರೆದಿದ್ದಾನೆ. ಹೀಗಿದ್ದರೂ ಇವನ ಕೃತಿ ಕನ್ನಡ ಜೈಮಿನಿ ಭಾರತ ಅಥವಾ ಜೈಮಿನಿ ಭಾರತವೆಂದೇ ಪ್ರಚಲಿತವಾಗಿರುವುದು ಆಶ್ಚರ್ಯಕರವಾದರೂ ಸತ್ಯವಾದ ಸಂಗತಿ.

## 2. ಲಕ್ಷ್ಮೀಶನ ಸ್ಥಳ-ಕಾಲ

ಲಕ್ಷ್ಮೀಶನು ನಿಜವಾಗಿಯೂ ಭಾಗ್ಯವಂತ. ಬಸವಣ್ಣ ಹೇಳಿರುವಂತೆ 'ಇವನಾರವ ಇವನಾರವ ಇವನಾರವ' ಎನ್ನಿಸಿಕೊಳ್ಳದೆ 'ಇವ ನಮ್ಮವ ಇವ ನಮ್ಮವ' ಎನ್ನುವ ಅಭಿಮಾನಕ್ಕೆ ಪಾತ್ರನಾದ ಕವಿಯಿವನು. ಅವನ ಜಯಂತ್ಯುತ್ಸವವನ್ನು ಆಚರಿಸುವ ಕಾಲದಲ್ಲಿ ಗುಲ್ಬರ್ಗ ಜಿಲ್ಲೆಯ ಸುರಪುರದ ಪಕ್ಕದಲ್ಲಿರುವ ದೇವಪುರದವರು ಹಾಗೂ ಚಿಕ್ಕಮಗಳೂರು ಜಿಲ್ಲೆಯ ದೇವನೂರಿನವರು ಈ ಕವಿ ನಮ್ಮವನು ಎನ್ನುವ ಹೆಮ್ಮೆಯಿಂದ ಮುಂದೆ ಬಂದಿದ್ದಾರೆ. ಎರಡು ಊರುಗಳವರೂ ಈ ಕವಿ ನಮ್ಮವನು, ಈ ಕವಿ ನಮ್ಮವನು ಎಂದು ಅಭಿಮಾನಪಡುತ್ತಿದ್ದಾರೆ. ಅಷ್ಟೇ ಏಕೆ, ಇಡೀ ಕರ್ನಾಟಕದಲ್ಲಿರುವ ಕಾವ್ಯಾಭ್ಯಾಸಿಗಳ ಮನಸ್ಸನ್ನು ಸೂರೆಗೊಂಡಿರುವ ಕೃತಾರ್ಥ ಕವಿ ಇವನು.

...........ಭ
ರದ್ವಾಜ ಗೋತ್ರಭವನಣ್ಣಮಾಂಕನ ಸುತಂ
ಸದ್ವಿನುತ ಕರ್ಣಾಟ ಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು

ಎಂದು ಈ ಕವಿಯೇ ಹೇಳಿಕೊಂಡಿರುವುದರಿಂದ ಈತನು ಭರಧ್ವಾಜ ಗೋತ್ರದಲ್ಲಿ ಹುಟ್ಟಿದ ಅಣ್ಣಮಾಂಕನ ಮಗ ಎಂಬುದು ವಿಶದವಾಗಿದೆ. ಈತನ ಪೂರ್ವಾಶ್ರಮದ ಹೆಸರು ಲಕ್ಷ್ಮೀಕಾಂತ ಹೆಬ್ಬಾರರು ಎಂಬ ಹೇಳಿಕೆಯೊಂದಿದೆ.

ಲಕ್ಷ್ಮೀಶನ ಊರು ದೇವನೂರು. ಗೀರ್ವಾಣಪುರ, ಸುರಪುರ, ದೇವಪುರ, ಅಮರಪುರ ಮೊದಲಾದ ಹೆಸರುಗಳು ದೇವನೂರಿನ ಸಂಸ್ಕೃತ ರೂಪಗಳು. ವಿದ್ವಾಂಸರಲ್ಲಿ ಲಕ್ಷ್ಮೀಶನು ಹುಟ್ಟಿದ ದೇವನೂರು ಯಾವುದು ಎಂಬ ಬಗೆಗೆ ವಿಪುಲವಾಗಿ ಚರ್ಚೆ ನಡೆ

ದಿದೆ. ಕಾವ್ಯದಲ್ಲಿ ಇದು ಯಾವ ದೇವನೂರು ಎಂದು ಸ್ಪಷ್ಟ ವಾಗಿಲ್ಲದಿರುವುದೇ ಈ ಚರ್ಚೆಗೆ ಕಾರಣ. ಕಾವ್ಯದಲ್ಲಿ ಬರುವ ವರ್ಣನೆಗಳು ಮತ್ತು ಚಿಕ್ಕಮಗಳೂರು ಜಿಲ್ಲೆಯ ದೇವನೂರು ಮತ್ತು ಸುತ್ತಮುತ್ತಲಿನ ಪ್ರಕೃತಿ ಸಂಪತ್ತನ್ನು ಗಮನಿಸಿದರೆ ಚಿಕ್ಕಮಗಳೂರು ಜಿಲ್ಲೆಯ ದೇವನೂರೇ ಲಕ್ಷ್ಮೀಶನ ಊರು ಎಂದು ಹೇಳಬೇಕಾಗುತ್ತದೆ.

ಲಕ್ಷ್ಮೀಶನ ಇಷ್ಟದೈವ ದೇವಪುರದರಸ ಲಕ್ಷ್ಮೀರಮಣ. ಪರಮ ಪತಿವ್ರತೆಗೆ ಗಂಡನೊಬ್ಬನಿದ್ದಂತೆ ನಮ್ಮ ಕವಿಗಳಲ್ಲಿಯೂ ಕೆಲವರಿಗೆ ಇಷ್ಟದೈವಗಳಿರುವುದುಂಟು. ಹರಿಹರ ರಾಘವಾಂಕರಿಗೆ ಹಂಪೆಯ ವಿರೂಪಾಕ್ಷನಿದ್ದಂತೆ, ನಾರಣಪ್ಪನಿಗೆ ಗದುಗಿನ ವೀರ ನಾರಾಯಣನಿದ್ದಂತೆ ಲಕ್ಷ್ಮೀಶನಿಗೆ ದೇವಪುರದ ಲಕ್ಷ್ಮೀರಮಣ ಸ್ವಾಮಿ ಇಷ್ಟದೈವವಾಗಿದ್ದಾನೆ.

ಸತ್ಕವಿಗಳಿಗೆ ನಮಸ್ಕರಿಸಿ ಕಾವ್ಯರಚನೆಯನ್ನು ಮಾಡಿದ್ದೇ ನೆಂದು ಹೇಳಿದರೂ ಈ ಕವಿ ಯಾವ ಪೂರ್ವಕವಿಯ ಹೆಸರನ್ನೂ ಸ್ಮರಿಸಿಲ್ಲ. ಆದರೆ ಲಕ್ಷ್ಮ ಕವಿ (ಕ್ರಿ.ಶ. 1723), ಕೋನಯ್ಯ (ಸು. ಕ್ರಿ.ಶ. 1750), ಬಬ್ಬೂರು ರಂಗ (ಸು. ಕ್ರಿ.ಶ. 1750) ಗೋವಿಂದ ಮೊದಲಾದ ಕವಿಗಳು ಲಕ್ಷ್ಮೀಶನನ್ನು ಭಕ್ತಿ ಗೌರವ ಗಳಿಂದ ಸ್ತುತಿಸಿದ್ದಾರೆ. ಇವರ ಮೇಲೆಲ್ಲಾ ಲಕ್ಷ್ಮೀಶನ ಪ್ರಭಾವ ವಿದೆ.

ಲಕ್ಷ್ಮೀಶ ಯಾವ ರಾಜಾಶ್ರಯದಲ್ಲಿಯೂ ಇದ್ದಂತೆ ತೋರುವು ದಿಲ್ಲ. ಈತನಿಗೆ ಇರುವ 'ಕರ್ಣಾಟಕವಿ ಚೈತ್ರವನ ಚೂತ' ಎಂಬ ಬಿರುದು ವಿದ್ವಾಂಸರು ಮತ್ತು ರಸಿಕರು ಕೊಟ್ಟುದಿರಬೇಕು ಅಥವಾ ತಾನೇ ಸಂತೋಷಕ್ಕೆ ಕರೆದುಕೊಂಡುದಿರಬೇಕು. ಈ

ಬಿರುದು ಕೆಲವೆಡೆ ಕರ್ಣಾಟಕವಿಚೂತವನ ಚೈತ್ರ ಎಂದೂ ಇದೆ. ಸ್ವಯಂ ವಿನಯಶಾಲಿಯಾದ ಲಕ್ಷ್ಮೀಶ ಎಂದೂ ತನ್ನನ್ನು ಕರ್ಣಾಟಕವಿ ಚೂತವನ ಚೈತ್ರನೆಂದು ಜಂಬದಿಂದ ಹೇಳಿಕೊಂಡಿರ ಲಾರ ಎನ್ನುವ ಡಾ॥ ಡಿ. ಎಲ್. ನರಸಿಂಹಾಚಾರ್, ಶ್ರೀ ಪಾಂಡು ರಂಗದೇಸಾಯಿ, ಶ್ರೀ ದೇವುಡು ನರಸಿಂಹಶಾಸ್ತ್ರಿ, ಶ್ರೀ ಶಿವ ಮೂರ್ತಿಶಾಸ್ತ್ರಿ ಮೊದಲಾದವರ ಅಭಿಪ್ರಾಯ ಅಂಗೀಕಾರಾರ್ಹ ವೆನ್ನಿಸುತ್ತದೆ.

ಈ ಕವಿ ಅತ್ಯಂತ ವಿನಯಶಾಲಿ. ಕುಮಾರವ್ಯಾಸ ವೀರ ನಾರಾಯಣನೆ ಕವಿ ಲಿಪಿಕಾರ ಕುವರವ್ಯಾಸ ಎನ್ನುವಂತೆ ಈ ಕವಿಯೂ ಸಂಗೀತ ಸುಕಲಾನಿಪುಣನಾದ ಗೀರ್ವಾಣಪುರ ದರಸ ಲಕ್ಷ್ಮೀರಮಣನು ವೀಣೆಯಿಂದ ಗಾನವನ್ನು ನುಡಿಸು ವಂತೆ ಇವನ ವಾಣಿಯಲ್ಲಿ ತಾನೇ ನೆಲೆಸಿದ್ದು ಈ ಕಾವ್ಯವನ್ನು ಹೇಳಿಸಿದ್ದಾನೆ ಎನ್ನುತ್ತಾನೆ. ಸತ್ಕವಿಗಳಿಗೆ ನಮಸ್ಕರಿಸಿ ಕೃತಿಯನ್ನು ರಚಿಸುವುದಾಗಿ ಹೇಳುತ್ತಾನೆ. ಹೃದಯ ಪದ್ಮದಲ್ಲಿ ಸದಾ ಲಕ್ಷ್ಮೀ ರಮಣನ ಪಾದಾರವಿಂದಗಳನ್ನು ಧ್ಯಾನಮಾಡುವ ಭಕ್ತರನ್ನು ಸದ್ವಿನಯದಿಂದ ಭಜಿಸುವ ಸಂತೋಷಕ್ಕಾಗಿ ಜೈಮಿನಿಯ ಭಾರ ತದ ಕಥೆಯನ್ನು ಕನ್ನಡದಲ್ಲಿ ವಿರಚಿಸಿರುವುದಾಗಿ ಹೇಳಿದ್ದಾನೆ. ಬ್ರಹ್ಮನ ಪಟ್ಟದರಾಣಿ, ವರದೆ, ಕಲ್ಯಾಣಿ, ಫಣಿವೇಣಿ, ವಾಣಿಯೇ ನನ್ನ ವದನಾಬ್ಜದಲ್ಲಿ ನೀನೇ ನೆಲಸಿದ್ದು ಅಮಲಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ–ಎಂದು ಭಕ್ತಿಯಿಂದ ಪ್ರಾರ್ಥಿಸಿಕೊಂಡಿದ್ದಾನೆ. ಈತನ ಕಾವ್ಯವನ್ನು ನೋಡಿದರೆ ವಾಣಿ ನಿಜವಾಗಿಯೂ ಈತನ ವದನಾಬ್ಜದಲ್ಲಿ ನೆಲಸಿದ್ದಂತೆಯೇ ತೋರು ತ್ತದೆ.

ಲಕ್ಷ್ಮೀಶನನ್ನು ಕುರಿತು ದಂತಕಥೆಗಳು ಪ್ರಚಲಿತವಾಗಿವೆ. ಷಡಕ್ಷರದೇವನ ಕಾವ್ಯದಿಂದ ರುದ್ರಭಟ್ಟನಿಗಾದ ಅವಮಾನವನ್ನು

ದೂರಮಾಡಲು ಲಕ್ಷ್ಮೀಶ ಈ ಜೈಮಿನಿ ಭಾರತವನ್ನು ಬರೆದ ನೆಂಬುದೆ ಆ ಕಥೆಯಾಗಿದೆ. ಈ ಮೂವರೂ ಸಮಕಾಲೀನರಲ್ಲ ದಿರುವಾಗಲೂ ಷಡಕ್ಷರಿ–ರುದ್ರಭಟ್ಟ–ಲಕ್ಷ್ಮೀಶರನ್ನು ಕುರಿತು ಹುಟ್ಟಿಕೊಂಡಿರುವ ದಂತಕಥೆ ಕೇವಲ ಕುತೂಹಲಕರವೂ, ಹಾಸ್ಯಾ ಸ್ಪದವೂ ಆಗಿದೆ.

ಲಕ್ಷ್ಮೀಶನ ಕಾಲ ಚರ್ಚಾಸ್ಪದವಾಗಿದೆ. ಹದಿನಾಲ್ಕಕ್ಕೂ ಮೀರಿರುವ ಈ ವಾದಗಳನ್ನು ಗಮನಿಸಿದರೆ ಈ ಕವಿ ಕ್ರಿ.ಶ. 1335 ರಿಂದ ಹಿಡಿದು 1873 ರವರೆಗೂ ಇದ್ದನೆನ್ನಬೇಕಾಗು ತ್ತದೆ. ಕವಿ ತನ್ನ ಕಾಲವನ್ನು ತಾನೇ ಹೇಳಿಕೊಂಡಿಲ್ಲ, ಯಾವ ಪೂರ್ವ ಕವಿಗಳನ್ನೂ ಹೆಸರೆತ್ತಿ ಸ್ಮರಿಸಿಲ್ಲ. ಹೀಗಾಗಿ ಇವನ ಕಾಲ ವನ್ನು ಅನ್ಯಪ್ರಮಾಣಗಳಿಂದಲೇ ನಿರ್ಣಯಿಸಬೇಕಾಗಿರುವುದರಿಂದ ಇಷ್ಟೊಂದು ವಾದಗಳು ಹುಟ್ಟಿಕೊಂಡಿವೆ. ಹೀಗಿದ್ದರೂ ಈತ ನನ್ನು ಸ್ತುತಿಸಿರುವ ಲಕ್ಷ್ಮಕವಿ, ಕೋನಯ್ಯ, ಬಬ್ಬೂರುರಂಗ ಮೊದಲಾದ ಕವಿಗಳ ಕಾಲಗಳ ಆಧಾರದಿಂದ ಮತ್ತು ಈತನ ಕೃತಿಗೂ ಹಾಗೂ ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣಕ್ಕೂ ಇರುವ ಕೆಲವು ನಂಬಲರ್ಹವಾದ ಹೋಲಿಕೆಗಳ ಆಧಾರದಿಂದ ಸದ್ಯಕ್ಕೆ ಈತನನ್ನು ಹದಿನಾರನೆಯ ಶತಮಾನದ ಕವಿ ಎನ್ನ ಬಹುದು. ಸದ್ಯಕ್ಕೆ ಈತನ ಕಾಲ ಕ್ರಿ.ಶ. 1550 ಎಂದು ಇಟ್ಟು ಕೊಳ್ಳಬಹುದು.

ಲಕ್ಷ್ಮೀಶ ಕವಿಯ ಗುರು ಯಾರು? ಈತನ ವಿದ್ಯಾಭ್ಯಾಸ ನಡೆದುದು ಎಲ್ಲಿ? ಎಂಬ ಈ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಕಷ್ಟ. ಏಕೆಂದರೆ ಈ ಅಂಶಗಳಾವುವೂ ಸ್ಪಷ್ಟವಾಗಿ ಎಲ್ಲೂ ಸೂಚಿತ. ವಾಗಿಲ್ಲ. ಈತನ ಕಾವ್ಯವನ್ನೇ ನೋಡಿದರೆ ಈತ ಸಂಸ್ಕೃತ, ಕನ್ನಡ ಭಾಷೆಗಳೆರಡರಲ್ಲೂ ವಿದ್ವಾಂಸನಾಗಿದ್ದಂತೆ ತೋರುತ್ತದೆ

ಸಂಸ್ಕೃತದಲ್ಲಿ ವ್ಯಾಸ ವಾಲ್ಮೀಕಿ, ಜೈಮಿನಿ ಮೊದಲಾದವರ ಕಾವ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿಕೊಂಡಿದ್ದಿರಬೇಕು. ಕನ್ನಡದಲ್ಲಿಯೂ ಪಂಪ-ರನ್ನ, ರಾಘವಾಂಕ, ಕುಮಾರವ್ಯಾಸಾದಿಗಳ ಕಾವ್ಯಗಳನ್ನೂ ಚೆನ್ನಾಗಿ ಮನನಮಾಡಿಕೊಂಡಿರಬೇಕು. ಕನ್ನಡದ ಷಟ್ಪದಿ ಕಾವ್ಯಗಳನ್ನೆಲ್ಲ ಅತ್ಯಂತ ಶ್ರದ್ಧೆಯಿಂದ ನೋಡಿರಬೇಕು. ಕೀರ್ತನ ಸಾಹಿತ್ಯದ ಗೇಯ ಸಮೃದ್ಧಿಗೂ ಈತನ ಕಿವಿ ಸದಾ ತೆರೆದಿತ್ತೆನ್ನಬಹುದು. ತನ್ನ ಕಾಲದವರೆಗೆ ಹರಿದುಬಂದಿದ್ದ ಕನ್ನಡ ಕಾವ್ಯದ ಪರಂಪರೆಯನ್ನು ಹಾಗೂ ಸಂಸ್ಕೃತ ಕಾವ್ಯಗಳ ಸೊಗಸುಗಳನ್ನು ಈತ ಚೆನ್ನಾಗಿ ಬಲ್ಲವನಾಗಿದ್ದನು ಎಂದು ಧೈರ್ಯವಾಗಿ ಹೇಳಬಹುದು.

## ಲಕ್ಷ್ಮೀಶನ ಕಾಲದ ವಾತಾವರಣ

ಲಕ್ಷ್ಮೀಶನಿದ್ದ ಕಾಲ ಕನ್ನಡ ಸಾಹಿತ್ಯದ ದೃಷ್ಟಿಯಿಂದ ಅತ್ಯಂತ ಪ್ರಮುಖವಾದ ಕಾಲ. ರಾಘವಾಂಕನಿಂದ ಪರಿಪುಷ್ಟಗೊಂಡು ಬಂದ ವಾರ್ಧಕ ಷಟ್ಪದಿ ಆತನ ನಾಟಕೀಯ ಪ್ರತಿಭೆಯಿಂದ ಸೊಂಪುವಡೆದಿತ್ತು. ಕುಮಾರವ್ಯಾಸನಂತೂ ಭಾಮಿನೀ ಷಟ್ಪದಿಯನ್ನು ಮಹಾಛಂದಸ್ಸಿನ ರೀತಿಯಲ್ಲಿಯೇ ಅರ್ಥಕ್ಕೆ ದುಡಿಯುವ ಅಪೂರ್ವ ವೈವಿಧ್ಯಮಯ ಶಕ್ತಸ್ಥಿತಿಗೆ ಏರಿಸಿದ್ದನು. ಕುಮಾರವ್ಯಾಸನಾದ ಮೇಲೆ ಮತ್ತೆ ಕವಿಗಳು ಹೆಚ್ಚು ವಿಸ್ತಾರವನ್ನು ಪಡೆದಿರುವ ವಾರ್ಧಕ ಷಟ್ಪದಿಯೇ ಕಥನಕ್ಕೆ ಹೆಚ್ಚು ಉಪಯುಕ್ತವೆಂದು ಭಾವಿಸಿದಂತಿತ್ತು.

ಈ ಕಾಲಕ್ಕೆ ಸರಿಯಾಗಿ ಹದಿಮೂರನೆಯ ಶತಮಾನದ ಹೊತ್ತಿಗೆ ಶ್ರೀ ನರಹರಿ ತೀರ್ಥರಿಂದ ಆರಂಭವಾಗಿದ್ದ ಕೀರ್ತನ ಪರಂಪರೆ ಮಹೋನ್ನತಿಯ ಶಿಖರವನ್ನೇರಿತ್ತು. ಈ ಪರಂಪರೆ

ಅಂದು ದೇಶದಲ್ಲಿ ಪ್ರಚಲಿತವಾಗಿದ್ದ ಬಹುಪಾಲು ಧಾಟಿಗಳಿಗೆ ಹಾಗೂ ಗೇಯತೆಯ ಲಯಗಳಿಗೆ ಕೊರಳಾಗಿತ್ತು. ತಂಬೂರಿಯ ಶ್ರುತಿಯೊಂದಿಗೆ ಪುರಂದರದಾಸ ಕನಕದಾಸರೇ ಮೊದಲಾದ ದಾಸರು ಮನೆಮನೆಯ ಬಾಗಿಲಲ್ಲಿ ನಿಂತು ಹಾಡಿದ ಕೀರ್ತನೆಗಳು ಮಂಜುಳಧ್ವನಿಯಿಂದ ನಿನದಿಸುತ್ತಿದ್ದವು. ನಾಡಿನ ಮೂಲೆಮೂಲೆ ಗಳಲ್ಲಿ ರೂಢಿಯಾಗಿದ್ದು ತುಂಬಿ ತುಳುಕಾಡುತ್ತಿದ್ದ ಜನಪದದ ಹಾಡಿನ ರಸದ ಬುಗ್ಗೆಗಳು ಬಣ್ಣಬಣ್ಣಗಳಿಂದ ತುಂಬಿ ರಾರಾಜಿ ಸುತ್ತಿದ್ದು ಪುರಂದರದಾಸರ ಮಹಾಪ್ರತಿಭೆಯ ಕಾರಣವಾಗಿ ಕರ್ನಾಟಕ ಸಂಗೀತ ಪದ್ಧತಿಯು ರೂಪುಗೊಂಡಿತ್ತು. ಇಂಥ ಗಾನ ಸಮೃದ್ಧಿ ಮತ್ತು ವಾರ್ಧಕ ಹಾಗೂ ಭಾಮಿನಿ ಷಟ್ಪದಿ ಗಳ ಅಪೂರ್ವ ರೀತಿಯ ಸಾಧನೆಗಳು ನಡೆದಿದ್ದ ಕಾಲದಲ್ಲಿಯೇ ಲಕ್ಷ್ಮೀಶ ಇದ್ದದ್ದು. ಅವನ ಕಿವಿಗಳು ಷಟ್ಪದಿಗಳ ಲಯಗಳಿಗೆ ಹಾಗೂ ಕೀರ್ತನೆಗಳ ಮಾಧುರ್ಯಕ್ಕೆ ಶ್ರುತಿಗೊಂಡಿದ್ದವು.

ಕಾವ್ಯದ ದೃಷ್ಟಿಯಿಂದ ನೋಡುವಾಗ ಲಕ್ಷ್ಮೀಶನ ಎದುರಿಗೆ ಅಪಾರವಾದ ಭಾಗವತ ಸಾರಸ್ವತ ಲೋಕವೇ ವಿಜೃಂಭಿಸಿತ್ತು. ರುದ್ರಭಟ್ಟನ ಜಗನ್ನಾಥ ಚರಿತ್ರೆ ಶ್ರೀ ಕೃಷ್ಣನ ಚರಿತ್ರೆಯೇ. ಕುಮಾರವ್ಯಾಸನಂತೂ ಶ್ರೀ ಕೃಷ್ಣ ಚರಿತ್ರೆಯನ್ನೇ ಬರೆದ. ಆತನ ಭಾರತದ ಸೂತ್ರಧಾರ ಶ್ರೀ ಕೃಷ್ಣನೇ. ಅಲ್ಲಿಂದ ಮುಂದೆ ಕೀರ್ತನ ಸಾಹಿತ್ಯದಲ್ಲಿ ಶ್ರೀ ಕೃಷ್ಣನ ಕಥೆ ಅತ್ಯಂತ ಅಪೂರ್ವವಾದ ಘಟನಾ ವಳಿಗಳನ್ನು ಒಳಗೊಂಡಿತು. ಕೃಷ್ಣನ ಬಾಲಲೀಲೆಗಳು ಹಾಗೂ ರಾಸಲೀಲೆಗಳು ಕೀರ್ತನೆಗಳಲ್ಲಿ ಬಹಳ ರೋಮಾಂಚಕಾರಿಯಾಗಿ ಮೂಡಿದ್ದುವು. ಹೀಗಾಗಿ ಲಕ್ಷ್ಮೀಶ ಬೆಳೆಯುವ ವೇಳೆಗೆ ಈತನ ಪ್ರತಿಭೆ ಶ್ರೀ ಕೃಷ್ಣನ ಕಥೆಗಳಿಂದ ಪೂರ್ಣವಾಗಿ ಆಕರ್ಷಿಸಲ್ಪಟ್ಟಿರ ಬೇಕು. ಒಂದುಕಡೆ ಗೇಯತೆ, ಮತ್ತೊಂದು ಕಡೆ ಷಟ್ಪದಿಗಳ ಝೇಂಕಾರ, ಇನ್ನೊಂದು ಕಡೆ ಶ್ರೀ ಕೃಷ್ಣನ ಕಥೆಗಳು ಇವೆಲ್ಲವೂ

ಈತನ ವ್ಯಕ್ತಿತ್ವವನ್ನು ಪೂರ್ಣವಾಗಿ ಆವರಿಸಿರಬೇಕು. ಲಕ್ಷ್ಮೀಶನ ಕಾವ್ಯವನ್ನೋದುವಾಗ ಉದ್ದಕ್ಕೂ ಈ ಮೂರು ಎಳೆಗಳೂ ಒಂದರೊಡನೊಂದು ಹಾಸುಹೊಕ್ಕಾಗಿ ಕೂಡಿಕೊಂಡಿರುವುದನ್ನು ಮನಗಾಣಬಹುದು.



## 3. ಜೈಮಿನಿ ಮತ್ತು ಲಕ್ಷ್ಮೀಶ

ಲಕ್ಷ್ಮೀಶನು ಬರೆದ ಕೃತಿ ಕನ್ನಡ ಜೈಮಿನಿ ಭಾರತ.* ಅಂದರೆ ಸಂಸ್ಕೃತದಲ್ಲಿ ಜೈಮಿನಿಯು ಬರೆದಿರುವ ಪಾಂಡವರು ಮಾಡಿದ ಅಶ್ವಮೇಧಯಾಗ ಪರ್ವದ ಕಥೆಯನ್ನೊಳಗೊಂಡ ಕಥೆಯನ್ನು ಲಕ್ಷ್ಮೀಶ ಕನ್ನಡಕ್ಕೆ ಅನುವಾದಿಸಿದ್ದಾನೆಂದು ಈ ಮಾತಿಗೆ ಅರ್ಥ ವಾಗುತ್ತದೆ. ಸಂಸ್ಕೃತ ಜೈಮಿನಿ ಭಾರತವನ್ನೂ ಲಕ್ಷ್ಮೀಶನ ಕನ್ನಡ 'ಜೈಮಿನಿ ಭಾರತ'ವನ್ನೂ ತುಲನೆಮಾಡಿ ನೋಡಿದರೆ ಇದನ್ನು 'ಕನ್ನಡ ಜೈಮಿನಿ ಭಾರತ' ಎನ್ನಬೇಕೋ ಅಥವಾ ಲಕ್ಷ್ಮೀಶನ ಭಾರತ ಎನ್ನಬೇಕೋ ಎಂಬುದು ವಿಶದವಾಗುತ್ತದೆ.

ಸಂಸ್ಕೃತ ಕವಿ ಜೈಮಿನಿಯಿದ್ದ ಕಾಲ ಖಚಿತವಾಗಿ ಗೊತ್ತಿಲ್ಲ. ಈತನೂ ಮಹರ್ಷಿ ವೇದವ್ಯಾಸರೂ ಸಮಕಾಲೀನರೆಂದು ಹಲವು ದಂತಕಥೆಗಳು ಹುಟ್ಟಿಕೊಂಡಿವೆ. ಇವಾವುವೂ ವಿಶ್ವಸನೀಯವಲ್ಲ. ಹದಿನೈದನೆಯ ಶತಮಾನದ ಅಂತ್ಯದಲ್ಲಿದ್ದ ವಿಜಯನಗರದ ಅರಸು ಸಾಳುವ ನರಸಿಂಹನ ಆಜ್ಞೆಯಂತೆ ಆತನ ಆಸ್ಥಾನ ಕವಿಯಾಗಿದ್ದ ಶ್ರೀ ಪಿಲ್ಲಲಮರ್ರಿ ಘನವೀರಭದ್ರನು ಜೈಮಿನಿ ಭಾರತವನ್ನು ತೆಲುಗಿಗೆ ಅನುವಾದಿಸಿದನೆಂದು ತಿಳಿಯುವುದರಿಂದ ಆತನಿಗೆ ಹಿಂದೆ ಸಂಸ್ಕೃತ ಕವಿಯಾದ ಜೈಮಿನಿ ಇದ್ದಿರಬೇಕೆಂದು ಸದ್ಯಕ್ಕೆ ತಿಳಿಯ ಬಹುದಾಗಿದೆ.

ಪ್ರಧಾನವಾಗಿ ನೋಡಿದರೆ ಸೋದರರ ಹತ್ಯೆಯಾದುದಕ್ಕಾಗಿ ವ್ಯಥೆಪಡುತ್ತಿದ್ದ ಪಾಂಡವರು ಅಶ್ವಮೇಧಯಾಗವನ್ನು ಮಾಡಿದ ಕಥೆಯೇ ಜೈಮಿನಿ ಭಾರತದ ವಸ್ತು. ಈ ಕಥೆ ವ್ಯಾಸಭಾರತದ

---

* ಸದ್ಯಕ್ಕೆ ಈತನು ಬರೆದ ಕೃತಿ ಇದೊಂದೆ ಎಂದು ಹೇಳಬೇಕಾಗಿದೆ. ಕೀರ್ತನೆಗಳನ್ನೂ ಈತ ಬರೆದಿರುವ ವಿಚಾರ ವಾದಗ್ರಸ್ತ.

ಅಶ್ವಮೇಧಿಕ ಪರ್ವದಲ್ಲಿಯೂ ಇದೆ. ಆದರೆ ಜೈಮಿನಿ ಬರೆದ ಕಥೆಗೂ, ವ್ಯಾಸರು ಬರೆದ ಕಥೆಗೂ ಹೋಲಿಕೆಗಳು ಕಡಮೆ. ವ್ಯಾಸಭಾರತದಲ್ಲಿ ಅಶ್ವಮೇಧಯಾಗ ಮಾಡಿದ ಕಥೆಯೇ ಪ್ರಧಾನ. ಜೈಮಿನಿಯಲ್ಲಿ ಹಾಗಾಗಿಲ್ಲ. ಈತನಿಗೆ ಶ್ರೀ ಕೃಷ್ಣನ ಕಥೆಯೇ ಪ್ರಮುಖ. ಶಂಖಚಕ್ರ ಗದಾಧಾರಿಯಾದ ಶ್ರೀ ಕೃಷ್ಣ ಕಾವ್ಯದ ತುಂಬ ತುಂಬಿಕೊಂಡಿದ್ದಾನೆ. ಅರ್ಜುನಾದಿಗಳೇ ಯುದ್ಧಕ್ಕೆ ಹೊರಟರೂ ಅವನ ಬೆನ್ನಿಗೆ ಸದಾ ಭಕ್ತರ ಬಂಧು ಶ್ರೀ ಕೃಷ್ಣಪರಮಾತ್ಮ ನಿಂತೇ ಇರುತ್ತಾನೆ. ಜೈಮಿನಿಗೆ ಅಶ್ವಮೇಧದ ಕಥೆ ಶ್ರೀ ಕೃಷ್ಣನ ಪಾರಮ್ಯವನ್ನು ಹೇಳುವ ಕಥೆಯಾಗಿದೆ. ಅವಕಾಶವೊದಗಿದಾಗೆಲ್ಲ ನಿಧಾನವಾಗಿ ಧರ್ಮವಿಚಾರಗಳನ್ನೂ ತಿಳಿಸಿದ್ದಾನೆ. ಪವಿತ್ರಕ್ಷೇತ್ರಗಳ ವರ್ಣನೆಯನ್ನೂ ಮಾಡಿದ್ದಾನೆ.

ಆದರೆ ಜೈಮಿನಿ ಭಾರತದಲ್ಲಿ ಒಂದು ವೈಶಿಷ್ಟ್ಯವಿದೆ. ಅಶ್ವಮೇಧದ ಕಥೆ ಕೇವಲ ಯುದ್ಧಗಳಿಗೆ ಮೀಸಲಾದ ಕಥೆಯಾದರೂ ಪ್ರತಿಭಾನ್ವಿತನಾದ ಜೈಮಿನಿಯು ಈ ಕಥೆಯನ್ನು ನವರಸಭರಿತವಾಗಿ ಮಾಡಲು ಯತ್ನಿಸಿದ್ದಾನೆ. ರಾಮಾಯಣ ಭಾರತ ಕಥೆಗಳ ಸವಿ ರಸಾಯನವನ್ನು ಈತ ಉಣಬಡಿಸುತ್ತಾನೆ. ಉದಾಹರಣೆಗೆ ಬಭ್ರುವಾಹನ-ಅರ್ಜುನರ ಕಾಳಗದ ಕಥೆ ಬಂದಾಗ ಇಂಥದೇ ತಂದೆಮಕ್ಕಳ ಕಾಳಗ ರಾಮಾಯಣ ಕಾಲದಲ್ಲಿ ಲವಕುಶ ರಾಮರಲ್ಲಿ ಆದ ಕಥೆಯನ್ನು ಜೋಡಿಸುತ್ತಾನೆ. ರಾಮಾಯಣದ ಕಥೆಯನ್ನು ಹೇಳಿ ಸವಿಸ್ತಾರವಾಗಿ ಸೀತಾ ಪರಿತ್ಯಾಗದ ಕಥೆ ಮತ್ತು ಸೀತಾ ಪರಿಗ್ರಹದ ಕಥೆಗಳನ್ನು ಹೇಳುತ್ತಾನೆ. ಕೇವಲ ಯುದ್ಧಗಳಿಂದ ಕೂಡಿದ ಅಶ್ವಮೇಧದ ಕಥೆಯನ್ನು ಕರುಣರಸದಿಂದ ತುಂಬುವಂತೆ ಮಾಡುವ ಪ್ರಯತ್ನ ಇಲ್ಲಿಯದು. ಮುಂದೆ ಶ್ರೀ ಕೃಷ್ಣನ ಮಹಿಮೆಯನ್ನು ಹೇಳುವುದಕ್ಕಾಗಿ ಮೂಲಾನಕ್ಷತ್ರದಲ್ಲಿ ಹುಟ್ಟಿದ ಹರಿಮಂತ್ರೋಚ್ಚಾರಣೆಯೇ ಜೀವನದ ಉಸಿರಾಗಿದ್ದ

ಅದೃಷ್ಟಶಾಲೀ ಮುಗ್ಧಭಕ್ತ ಚಂದ್ರಹಾಸನ ಕಥೆಯನ್ನು ಹೇಳುತ್ತಾನೆ. ಒಟ್ಟಿನಲ್ಲಿ ಜೈಮಿನಿ ಭಾರತವು ಸುಂದರವಾದ ಕಥೆಗಳು, ವಿಷ್ಣುಮಹಿಮೆ, ವ್ರತಾಚರಣೆಗಳು, ಸಾಲಿಗ್ರಾಮಪೂಜೆ, ತುಲಸಿ ಮಾಲಾಧಾರಣ ಮೊದಲಾದ ವ್ರತಮಹಾತ್ಮೆಗಳಿಂದ ತುಂಬುವಂತೆ ಮಾಡಿದ್ದಾನೆ. ಕಥೆಗಳನ್ನು ನಿರೂಪಿಸುವಲ್ಲಿ ಜೈಮಿನಿಯು 'ಜೈಮಿನಿರುವಾಚ,' 'ಗೋಪ್ಯುವಾಚ,' 'ಭೀಮಉವಾಚ, 'ಭೀಷ್ಮೋವಾಚ,' 'ಶ್ರೀ ಕೃಷ್ಣ ಉವಾಚ' ಎನ್ನುವ 'ಉವಾಚ ಶೈಲಿ' ಯನ್ನು ಅಂದರೆ ಪುರಾಣ ಶೈಲಿಯನ್ನು ಹೆಚ್ಚಾಗಿ ಅನುಸರಿಸುತ್ತಾನೆ. ಅಲ್ಲದೆ ಶ್ರೀ ಹರಿಯ ಮಹಿಮೆಗಳನ್ನು ವರ್ಣಿಸುವ ಭರದಲ್ಲಿ ಶ್ರೀ ಹರಿಯನ್ನು ಒಲಿಸಿಕೊಳ್ಳಲು ಮಾಡಬೇಕಾದ ವ್ರತಾಚರಣೆಗಳ ಮಾಹಾತ್ಮ್ಯ ವಿವರಗಳನ್ನು ಬೇಸರವಿಲ್ಲದೆ ಲಂಬಿಸಿದ್ದಾನೆ. ಹೀಗಾಗಿ ಜೈಮಿನಿ ಭಾರತವು ರಾಮಾಯಣ ಭಾರತಗಳ ರಸಾಯನವಾಗಿದ್ದರೂ, ಚಂದ್ರಹಾಸ, ಚಂಡಿಯರಂಥ ವ್ಯಕ್ತಿಗಳ ಕಥೆಗಳಿಂದ ಕೂಡಿದ್ದರೂ ಹೆಚ್ಚಾಗಿ ಪುರಾಣ ಕಾಂತಿಯನ್ನೇ ಪಡೆದಿದೆ. ಸುಧನ್ವ, ಜ್ವಾಲೆ, ಪ್ರಮೀಳೆ, ತಾಮ್ರಧ್ವಜರಂಥವರನೇಕರ ಚಿತ್ತಾಕರ್ಷಕವಾದ ಕಥೆಗಳಿದ್ದೂ ಜೈಮಿನಿಯ ಅಶ್ವಮೇಧದ ಕಥೆ ಅರವತ್ತೆಂಟು ಅಧ್ಯಾಯಗಳಲ್ಲಿ ನಿಧಾನವಾಗಿ ನಡೆಯುತ್ತದೆ.

ಲಕ್ಷ್ಮೀಶನಿಗೆ ಜೈಮಿನಿಯ ಅಶ್ವಮೇಧದ ಕಥೆ ಹಿಡಿಸಿದೆ. ಈತನ ಕೃಷ್ಣಭಕ್ತಿಯ ಭಾಗವತ ಕಲ್ಪನೆಗೆ ಈ ಕಥೆ ಒಳ್ಳೆಯ ವಸ್ತುವಾಗಿದೆ. ಪಂಪ ಹಿಂದೆ ಆಗಲೆ 'ವಿಕ್ರಮಾರ್ಜುನ ವಿಜಯ' ದಲ್ಲಿ 'ಸಮಸ್ತಭಾರತ' ದ ಕಥೆಯನ್ನು ಹೇಳಿ ಮುಗಿಸಿದ್ದ. ರನ್ನ ಸಾಹಸಭೀಮ ವಿಜಯದ ಕಥೆಯಲ್ಲಿಯೂ ಭಾರತದ ಕಥೆಯನ್ನು – ಅಶ್ವಮೇಧಯಾಗಕ್ಕೆ ಹಿಂದಿನ ಕಥೆಯನ್ನು – ಹೇಳಿಯಾಗಿತ್ತು. ನಾರಣಪ್ಪನಂತೂ ವ್ಯಾಸಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಅದ್ಭುತವಾಗಿ ಪುನಸ್ಸೃಷ್ಟಿಸಿ 'ಕುಮಾರವ್ಯಾಸ' ನಾಗಿದ್ದ,

ಅಶ್ವಮೇಧದ ಕಥೆಯನ್ನೇ ಈವರೆಗೆ ಇಷ್ಟು ವಿವರವಾಗಿ ಹೇಳಿದವರು ಇರಲಿಲ್ಲ. ಈ ಅಶ್ವಮೇಧದ ಕಥೆಯುಂತೂ ಚಂಡಿ. ಚಂದ್ರಹಾಸ ಮೊದಲಾದ ಅನೇಕ ಉಪಾಖ್ಯಾನಗಳ ಗೊಂಚಲಾಗಿತ್ತು. ಜೈಮಿನಿಯ ಅಶ್ವಮೇಧದ ಕಥೆ ಇನ್ನೊಂದು ದೃಷ್ಟಿಯಿಂದಲೂ ವಿಶಿಷ್ಟವಾಗಿತ್ತು. ಅಂದರೆ ಅದು ಭಾರತ ರಾಮಾಯಣ ಕಥೆಗಳ ಸವಿ ರಸಾಯನವೂ ಆಗಿತ್ತು. ಹುಟ್ಟುಕಥೆಗಾರನೂ, ಭಾಗವತ ಕಲ್ಪನಾಲೋಲನೂ ಆಗಿದ್ದ ಲಕ್ಷ್ಮೀಶನನ್ನು ಈ ಕಥೆ ಆಕರ್ಷಿಸಿದ್ದು ಆಶ್ಚರ್ಯವಲ್ಲ. ಲಕ್ಷ್ಮೀಶ ಮನಸೋತು ಈ ಕಥೆಗಳನ್ನು ಕನ್ನಡದಲ್ಲಿ ಹೇಳಲು ಪ್ರಯತ್ನಿಸಿದ. ಕನ್ನಡದಲ್ಲಿ ಕಥೆಗಳನ್ನು ಹೇಳುವಾಗ ಈತನ ದೃಷ್ಟಿ ಕಾವ್ಯಸೌಂದರ್ಯದ ಕಡೆಗೆ ಹೆಚ್ಚು ಹೊರಳಿತು. ಅರವತ್ತೆಂಟು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಹರಡಿಕೊಂಡಿದ್ದ ಈ ಕಥೆಯನ್ನು ಲಕ್ಷ್ಮೀಶ ಕೇವಲ ಮೂವತ್ತನಾಲ್ಕು ಸಂಧಿಗಳಲ್ಲಿ ಸಾವಿರದ ಒಂಭೈನೂರ ಏಳು ವಾರ್ಧಕ ಷಟ್ಪದಿಗಳಲ್ಲಿ ಹೇಳಿ ಮುಗಿಸಿದ. ಹೀಗೆ ಹೇಳುವಾಗ ಅನವಶ್ಯವಾಗಿ ವಿಸ್ತಾರಗೊಂಡಿದ್ದ ಮೂಲದ ಭಾಗಗಳನ್ನು ಕೈಬಿಟ್ಟ. ಕಥೆಗಳ ಸೊಗಸಿಗೆಂದು ಅಲ್ಲಿಇಲ್ಲಿ ಕಥಾ ವಿವರಗಳನ್ನು ಹಿಂದೆಮುಂದೆ ಮಾಡಿಕೊಂಡ. 'ಉವಾಚ' ರೀತಿಯ ಪುರಾಣ ಶೈಲಿಯನ್ನು ಕೈಬಿಟ್ಟು ಕಥನ ಶೈಲಿಯನ್ನು ಹಿಡಿದ. ಒಟ್ಟಾರೆ ಶ್ರೀ ಕೃಷ್ಣನ ಮಹಿಮೆಯ ಕಡೆಗೇ ತನ್ನ ದೃಷ್ಟಿಯನ್ನೆಲ್ಲ ಕೇಂದ್ರೀಕರಿಸಿದರೂ ಕಾವ್ಯವನ್ನು ಅಲಕ್ಷಿಸಲಿಲ್ಲ. ಹಾಗೆ ನೋಡಿದರೆ ಕಾವ್ಯಸತ್ವದ ದೃಷ್ಟಿಯಿಂದ ಕನ್ನಡ ಜೈಮಿನಿ ಭಾರತವು ಸಂಸ್ಕೃತ ಜೈಮಿನಿ ಭಾರತಕ್ಕಿಂತ ಹೆಚ್ಚು ಉತ್ತಮ ದರ್ಜೆಯ ಕಾವ್ಯವಾಗುವಂತೆ ಮಾಡಿದ. ಹೀಗೆ ಹೇಳುವಾಗ ಈತನ ಷಟ್ಪದಿಗಳು ಗೇಯತೆಯಿಂದ ಪರಿಮಳಿತವಾಗಿದ್ದು ನಾದಲೋಲತೆಯನ್ನು ಪಡೆದವು.

ಮೇಲಿನ ವಿವರದಲ್ಲಿ ಲಕ್ಷ್ಮೀಶನ ಸಂಕ್ಷೇಪವಾಗಿ ಹೇಳುವ ಗುಣ, ಕಥನಶಕ್ತಿ ಹಾಗೂ ಔಚಿತ್ಯ ಪ್ರಜ್ಞೆಗಳನ್ನು ನೋಡಲಾಯಿತು. ಇಷ್ಟಾದರೂ ಲಕ್ಷ್ಮೀಶ ಕೇವಲ ಸಂಗ್ರಹಕಾರ ಮತ್ತು ಅನುವಾದಕಾರ ಮಾತ್ರವೇ ಆಗಿದ್ದಾನೆಯೇ ಅಥವಾ ಸ್ವತಂತ್ರ ಕವಿಯಾಗಿದ್ದಾನೆಯೆ ಎಂಬುದನ್ನು ವಿಶ್ಲೇಷಿಸಿಯೇ ತಿಳಿಯಬೇಕು.

# 4. ಕನ್ನಡ ಜೈಮಿನಿ ಭಾರತ ಮತ್ತು ಕಥಾಸಾರ

ಜಯಮೇಜಯ ಮಹಾರಾಜನ ಕೋರಿಕೆಯಂತೆ ಜೈಮಿನಿ ಮಹರ್ಷಿಗಳು ಅಶ್ವಮೇಧದ ಕಥೆಯನ್ನು ಹೀಗೆ ಹೇಳಿದರು:

ಗೋತ್ರ ವಧೆಮಾಡಿದ ಪಾಪದ ನೋವು ಧರ್ಮರಾಜನನ್ನು ಬಾಧಿಸುತ್ತಿತ್ತು. ವ್ಯಾಸರು ಬಂದು ಅಶ್ವಮೇಧಯಾಗವನ್ನು ಮಾಡಲು ಉಪದೇಶಿಸಿ ಅದರ ಕ್ರಮಗಳನ್ನು ವಿವರಿಸಿದರು. ಇಷ್ಟರಲ್ಲಿ ಶ್ರೀ ಕೃಷ್ಣನೂ ಅಲ್ಲಿಗೆ ಬಂದನು. ಅಶ್ವಮೇಧ ಮಾಡು ವುದು ಬಹಳ ಕಷ್ಟ ಎಂದು ಮೊದಲು ಹೇಳಿದರೂ ಪಾಂಡವ ಸ್ಥಾಪನಾಚಾರ್ಯನಾದ ಶ್ರೀ ಕೃಷ್ಣ ಕೊನೆಗೆ ತಾನೇ ಕೃಪೆಯಿಟ್ಟು ಇವರ ಹಿಂದೆನಿಂತು ಯಜ್ಞ ನಡೆಸಿಕೊಡುವುದಾಗಿ ಆಶೀರ್ವದಿ ಸಿದನು.

ಯಾಗಕ್ಕೆ ಅರ್ಹವಾದ ಕುದುರೆಯನ್ನು ಸಂಗ್ರಹಿಸಲು ಭೀಮ ಭದ್ರಾವತಿಗೆ ಹೋಗಿ ಯೌವನಾಶ್ವನನ್ನು ಸೋಲಿಸಿ ಕುದುರೆ ಯನ್ನು ಪಡೆದನು. ಯೌವನಾಶ್ವನೂ ಪಾಂಡವರನ್ನು ನೋಡಲು ಬಂದನು. ಯಜ್ಞಕಾಲ ಸಮೀಪಿಸುತ್ತಿರುವಾಗ ಕೃಷ್ಣದ್ವೇಷಿ ಯಾದ ಅನುಸಾಲ್ವ ಈ ಕುದುರೆಯನ್ನು ಕದ್ದನು. ಆದರೆ ಪಾಂಡವ ರಿಗೆ ಸೋತು ಕುದುರೆಯನ್ನು ಹಿಂತಿರುಗಿಸಿದನು. ಧರ್ಮಜ ಯಜ್ಞದೀಕ್ಷೆ ಪಡೆದನು. ಯಜ್ಞಾಶ್ವ ಮಾಹೀಷ್ಮತೀ ನಗರಕ್ಕೆ ಬಂದಿತು. ಅಗ್ನಿದೇವನ ಅಳಿಯನಾದ ನೀಲಧ್ವಜ ಅದನ್ನು ಕಟ್ಟಿ ಹಾಕಿದನು. ಅರ್ಜುನನು ಯುದ್ಧಮಾಡಿ, ಅಗ್ನಿದೇವನನ್ನು ಒಲಿಸಿ ಕೊಂಡು ಕುದುರೆಯನ್ನು ಪಡೆದನು. ನೀಲಧ್ವಜನ ಹೆಂಡತಿ

ಜ್ವಾಲೆಯ ಒತ್ತಾಯದಿಂದ ಮತ್ತೆ ನೀಲಧ್ವಜ ಯುದ್ಧಮಾಡಿ ಮಗನನ್ನು ಕಳೆದುಕೊಂಡು ಕೊನೆಗೆ ಕುದುರೆಯನ್ನು ಹಿಂತಿರುಗಿಸಿದನು. ಆದರೆ ಜ್ವಾಲೆ ಸೇಡಿನಿಂದ ತಮ್ಮನ ಬಳಿಗೆ ಹೋಗಿ ಅವನು ಯುದ್ಧಮಾಡಲು ನಿರಾಕರಿಸಲು ತಪಸ್ಸಿನಿಂದ ಗಂಗೆಯನ್ನು ಪ್ರತ್ಯಕ್ಷಮಾಡಿಕೊಂಡು ಮಗನಿಂದ ಅರ್ಜುನನಿಗೆ ಸಾವಾಗಲೆಂದು ಶಾಪಕೊಡಿಸಿದಳು. ತಾನು ಅಗ್ನಿಪ್ರವೇಶಮಾಡಿ ಅರ್ಜುನನನ್ನು ಕೊಲ್ಲುವ ಬಾಣವಾಗಿ ಬಭ್ರುವಾಹನನ ಬತ್ತಳಿಕೆ ಸೇರಿದಳು.

ಕುದುರೆ ಮುಂದೆ ಸೌಭರಿಯ ಆಶ್ರಮದ ಬಳಿ ಕಲ್ಲಲ್ಲಿ ಕೀಲಿಸಿ ಹೋಯಿತು. ಚಂಡಿಯ ಉದ್ಧಾರವಾದ ಮೇಲೆ ಮುಂದೆ ನಡೆಯಿತು. ಹರಿಭಕ್ತನಾದ ಹಂಸಧ್ವಜ ಇದನ್ನು ಕಟ್ಟಿದನು. ಯುದ್ಧ ಕಾಲದ ಮಗನ ವರ್ತನೆಗಾಗಿ ಹಂಸಧ್ವಜ ಸುಧನ್ವನಿಗೆ ಕುದಿವ ಎಣ್ಣೆಕೊಪ್ಪರಿಗೆಯಲ್ಲಿ ಬೀಳುವ ಶಿಕ್ಷೆವಿಧಿಸಿದನು. ಹರಿಯ ಕೃಪೆಯಿಂದ ಸುಧನ್ವ ಬದುಕಿದನು. ಸುಧನ್ವ ಸುರಥರು ಅಜೇಯರಾಗಿರಲು ಶ್ರೀ ಕೃಷ್ಣನೇ ಬಂದು ಸುಧನ್ವನನ್ನು ಕೊಂದನು. ಸುರಥ ಅರ್ಜುನನಿಂದ ಸತ್ತನು. ಯಜ್ಞದ ಕುದುರೆ ಪಾರ್ವತಿಯ ಪುಣ್ಯ ತಪೋವನವನ್ನು ಸೇರಿ ಕೊಳಗಳಲ್ಲಿ ಮಿಂದು ಹೆಣ್ಣುದುರೆ ಹೆಬ್ಬುಲಿಗಳಾಗಿರಲು ಅರ್ಜುನ ಕೃಷ್ಣ ಧ್ಯಾನದಿಂದ ಕುದುರೆಯನ್ನು ಮೊದಲಿನಂತೆ ಪಡೆದು ಮುಂದೆ ಹೊರಟನು. ಸ್ತ್ರೀ ರಾಜ್ಯವನ್ನು ಕುದುರೆ ಪ್ರವೇಶಿಸಿತು. ಅಲ್ಲಿ ಆದ ಅಶರೀರವಾಣಿಯ ಆದೇಶದಂತೆ ಅರ್ಜುನ ಅಲ್ಲಿನ ರಾಣಿ ಪ್ರಮೀಳೆಯನ್ನು ಮದುವೆಯಾಗಿ ಕುದುರೆಯ ಜೊತೆ ಮುಂದುವರಿದನು. ಕುದುರೆ ಮುಂದೆ ರಾಕ್ಷಸ ಭೀಷಣನ ರಾಜ್ಯ ಪ್ರವೇಶಿಸಿತು. ಮಾಯಾವಿಯಾದ ರಾಕ್ಷಸನ ಮಾಯೆಗಳನ್ನು ಗೆದ್ದು ರಾಕ್ಷಸನನ್ನು ನರ ಕೊಂದನು. ಕುದುರೆ ಮುಂದೆ ಮಣಿಪುರವನ್ನು ಸೇರಿತು. ಬಭ್ರುವಾಹನ ಅದನ್ನು ಕಟ್ಟಿಹಾಕಿದನು. ತಾಯಿ ಚಿತ್ರಾಂಗದೆ ಅರ್ಜುನ ತನ್ನ

ತಂದೆಯೆಂಬುದನ್ನು ತಿಳಿಸಲು ಕುದುರೆಯನ್ನು ಹಿಂದಿರುಗಿಸಲು ಬಭ್ರುವಾಹನ ಅರ್ಜುನನನ್ನು ಕಂಡನು. ತಂದೆ ತನ್ನನ್ನು ಕೀಳಾಗಿ ಕಂಡಾಗ ಲವಕುಶ ರಾಮರಿಗೆ ಯುದ್ಧವಾದಂತೆ (ಇಡೀ ರಾಮಾಯಣದ ಕಥೆ ವಿವರವಾಗಿ ಮುಂದೆ ಬಂದಿದೆ) ತಂದೆಮಕ್ಕಳಿಗೆ ಯುದ್ಧವಾಗಿ ಅರ್ಜುನ ಸತ್ತನು. ಚಿತ್ರಾಂಗದೆ ವ್ಯಥಿತಳಾಗಿದ್ದಾಗ ಉಲೂಪಿ ಬಂದು ಪಾತಾಳದ ಸಂಜೀವಕ ಮಣಿಯಿಂದ ಅರ್ಜುನನನ್ನು ಬದುಕಿಸಲು ಹೇಳಿದಳು. ಬಭ್ರುವಾಹನ ಪಾತಾಳಕ್ಕೆ ಹೋಗಿ ತನ್ನ ಪೌರುಷದಿಂದ ಸರ್ಪಗಳನ್ನೂ ಆದಿಶೇಷನನ್ನೂ ಪೀಡಿಸಲು ಆದಿಶೇಷನೇ ಮಣಿಯನ್ನು ಅರ್ಜುನನಿದ್ದೆಡೆಗೆ ತಂದನು. ಆದರೆ ಮಂತ್ರಿ ಧೃತರಾಷ್ಟ್ರನ ಮಕ್ಕಳು ಅರ್ಜುನನ ತಲೆಯನ್ನು ಕದ್ದಿದ್ದರು. ಇಭಪುರಿಯಲ್ಲಿ ಅಪಶಕುನಗಳಾದುವು. ಆಗ ಶ್ರೀ ಕೃಷ್ಣನೇ ಬಂದು ತನ್ನ ಶಕ್ತಿಯಿಂದ ಅರ್ಜುನನ ತಲೆಯನ್ನು ತರಿಸಿ ಬದುಕಿಸಿದನು. ಕುದುರೆ ಮುಂದೆ ಮಯೂರಧ್ವಜನ ರತ್ನಪುರಿ ಸೇರಿತು. ಎಂಟನೆಯ ಅಶ್ವಮೇಧ ಮಾಡುತ್ತಿದ್ದ ರಾಜನ ಕುಮಾರ ಪಾಂಡವರ ಕುದುರೆಯನ್ನು ಕಟ್ಟಿದನು, ತಾಮ್ರಧ್ವಜನಿಗೂ ಕೃಷ್ಣಾರ್ಜುನರಿಗೂ ಯುದ್ಧನಡೆದು ಕೃಷ್ಣಾರ್ಜುನರು ಮೂರ್ಛಿತರಾದರು. ಹರಿಭಕ್ತನಾದ ಮಯೂರಧ್ವಜ ಈ ವಾರ್ತೆಯನ್ನು ಕೇಳಿ ತಾನೇ ಹರಿಯನ್ನು ನೋಡಲು ಹೊರಟನು. ಕೃಷ್ಣನು ಉಪಾಯದಿಂದ ಸಿಂಹವೊಂದಕ್ಕೆ ಬಲಿಯಾಗಲಿರುವ ಮಗನನ್ನುಳಿಸಲು ಅರ್ಧದೇಹ ಕೊಡಬೇಕೆಂದು ಕೇಳಿದನು. ಮಯೂರಧ್ವಜ ತನ್ನ ಅರ್ಧ ದೇಹವನ್ನು ಸೀಳಿಸುವನು. ಭಕ್ತಿಗೆ ಮೆಚ್ಚಿದ ಕೃಷ್ಣ ಮಯೂರಧ್ವಜ-ತಾಮ್ರಧ್ವಜರ ಭಕ್ತಿಯನ್ನು ಸ್ವೀಕರಿಸಿ ಕುದುರೆಯನ್ನು ಪಡೆದು ಮುಂದೆ ಹೋದನು.

ಕುದುರೆ ಮುಂದೆ ಸಾರಸ್ವತನಗರ ಸೇರಿತು. ಯಮುನ ಮಾವ

ನಾದ ಅಲ್ಲಿನ ದೊರೆ ವೀರವರ್ಮನಿಗೂ, ಅರ್ಜುನನಿಗೂ ಘೋರ ಯುದ್ಧವಾಯಿತು. ಶ್ರೀ ಕೃಷ್ಣನ ಮಹಿಮೆಯಿಂದ ವೀರವರ್ಮ ಸೋಲುವನು. ಯಮ ಮಾವನನ್ನು ಶ್ರೀ ಕೃಷ್ಣನಿಗೆ ಬಿಟ್ಟು ತನ್ನೂರಿಗೆ ಹೋದನು. ಮುಂದೆ ಕುದುರೆ ಕುಂತಳನಗರವನ್ನು ಸೇರಿತು. ಹರಿಭಕ್ತನಾದ ಚಂದ್ರಹಾಸನ ಇಡೀ ಕಥೆಯನ್ನು ನಾರ ದರೇ ಅರ್ಜುನನಿಗೆ ತಿಳಿಸುವರು. ಚಂದ್ರಹಾಸನು ಕೃಷ್ಣ ಭಕ್ತಿ ಯಿಂದಾಗಿ ಕುದುರೆಯನ್ನು ಬಿಟ್ಟು ಪಾಂಡವರಿಗೆ ಬೆಂಬಲವಾಗು ವನು.

ಕುದುರೆ ಮುಂದೆ ಸಮುದ್ರ ತೀರವನ್ನು ಸೇರಿತು. ಹಂಸ ಧ್ವಜಾದಿಗಳು ಸಮುದ್ರವನ್ನು ಹೊಕ್ಕರು. ಅಲ್ಲಿ ಬಕದಾಲ್ಭ್ಯನ ದರ್ಶನವಾಗಿ ಅವನಿಂದ ಅನೇಕ ಬ್ರಹ್ಮರ ಕಥೆಗಳನ್ನೂ, ಭಗವಂತನ ಲೀಲೆಯನ್ನೂ ಅರಿತು ಸಾವಿರಮುಖದ ಪರಮೇಷ್ಠಿಗಳನ್ನು ಕಾಣುವರು. ಬಕದಾಲ್ಭ್ಯನು ಯಜ್ಞಕ್ಕಾಗಿ ಧರ್ಮರಾಯನಲ್ಲಿಗೆ ಬರುವನು.

ಮುಂದೆ ಕುದುರೆ ಸಿಂಧೂ ದೇಶವನ್ನು ಸೇರಿತು. ದುಶ್ಶಳೆ ಕೃಷ್ಣಾರ್ಜುನರನ್ನು ಮೊರೆಹೋಗಲು ಅವಳನ್ನು ಅನುಗ್ರಹಿಸಿ ಮುಂದೆ ಹೊರಡುವರು. ವರ್ಷದ ಕೊನೆಗೆ ಯಜ್ಞದ ಕುದುರೆ ಧರ್ಮರಾಜನಿದ್ದಲ್ಲಿಗೆ ಬಂದಿತು. ಯಜ್ಞದ ಏರ್ಪಾಡು ನಡೆ ದುವು. ಶ್ರೀ ಕೃಷ್ಣರುಕ್ಮಿಣಿಯರಾದಿಯಾಗಿ ಆರು ಮಂದಿ ರಾಜ ದಂಪತಿಗಳು ಗಂಗೋದಕ ತರಲು ಹೊರಟರು. ಆಗ ನಾರದರು ಸತ್ಯಭಾಮೆ-ಜಾಂಬವತಿಯರನ್ನು ರೇಗಿಸಿ ಶ್ರೀ ಕೃಷ್ಣನ ವಿರಾಡ್ರೂಪ ಮಹಿಮೆಗೆ ಬೆರಗಾಗುವರು.

ಯಜ್ಞಶಾಲೆಯಲ್ಲಿ ದ್ರೌಪದೀ-ಧರ್ಮರಾಜರು ಮಿಂದು ಯಜ್ಞವನ್ನು ಸಾಂಗಗೊಳಿಸುವರು. ಯಜ್ಞದ ಕುದುರೆಯನ್ನು

ತಂದು ವಿಧ್ಯುಕ್ತವಾಗಿ ಮಂತ್ರವನ್ನುಚ್ಚರಿಸಿ, 'ಅಶ್ವವೇ ನೀನು ಅಶ್ವಲೋಕದಲ್ಲಿ ಅಮರಪದವಿಯನ್ನು ಪಡೆಹೋಗು' ಎನ್ನಲು ಕುದುರೆ ಬೇಡವೆಂದು ತಲೆಯಲ್ಲಾಡಿಸಿತು. ಇದರರ್ಥವೇನೆಂದು ನಕುಲನನ್ನು ಕೇಳಲು ಆತ ಇದಕ್ಕೆ ಮೇಲಿನ ಲೋಕದ ಅಶ್ವಪದವಿ ಬೇಕಿಲ್ಲ; ವಿಷ್ಣುಸಾಯುಜ್ಯವೇ ಬೇಕಾಗಿದೆ ಎಂದು ವಿವರಿಸಿದ. ಕುದುರೆಯನ್ನು ಯೂಪಸ್ತಂಭಕ್ಕೆ ಕಟ್ಟಿದರು. ಧೌಮ್ಯರು ಅದರ ಕಿವಿಯನ್ನು ಕತ್ತರಿಸಲು ಕ್ಷೀರಧಾರೆ ಹರಿಯಿತು. ಭೀಮ ಅದರ ತಲೆಯನ್ನು ಕತ್ತರಿಸಲು ಅದು ಆಕಾಶಕ್ಕೆ ಹಾರಿ ಅಡಗಿತು. ಕುದುರೆಯ ಪ್ರಾಣ ಶ್ರೀ ಕೃಷ್ಣನಲ್ಲಿ ಲೀನವಾಯಿತು. ಇಡೀ ಶರೀರ ಕರ್ಪೂರವಾಗಲು ಅದನ್ನು ಇಂದ್ರನಿಗೆ ಆಹುತಿಯಿತ್ತರು. ಕೊನೆಗೆ ಅಶ್ವಮೇಧದ ಫಲವನ್ನು ಧರ್ಮರಾಯ ಶ್ರೀ ಕೃಷ್ಣನಿಗೆ ಅರ್ಪಿಸುವನು. ಹೀಗೆ ಧರ್ಮರಾಜನ ಅಶ್ವಮೇಧಯಾಗ ಶ್ರೀ ಕೃಷ್ಣನ ಕೃಪೆಯಿಂದ ಸಮಾಪ್ತವಾಗುವುದು.

ಈ ಕಥೆಯನ್ನು ನೋಡಿದರೆ ಕನ್ನಡ ಜೈಮಿನಿ ಕಾವ್ಯದ ಸ್ಥೂಲ ವಾದ ಚೌಕಟ್ಟು ಸ್ವಲ್ಪಮಟ್ಟಿಗೆ ತಿಳಿದಂತಾಗುತ್ತದೆ. ಈ ಕಥೆಯ ಉದ್ದಕ್ಕೂ ಶ್ರೀ ಕೃಷ್ಣನ ಪ್ರಭಾವಳಿ ಇದ್ದೇ ಇದೆ. ಶ್ರೀ ಕೃಷ್ಣ ನಂತೂ ಸದಾ ಶಂಖಚಕ್ರಗದಾಧಾರಿಯಾಗಿಯೇ ತುದಿಗಾಲಮೇಲೆ ನಿಂತಿದ್ದಾನೆ, ತನ್ನ ಭಕ್ತರ ಉದ್ಧಾರಕ್ಕಾಗಿ. ಅರ್ಜುನನಾಗಲಿ, ಭೀಮ ನಾಗಲಿ, ತಾಮ್ರಧ್ವಜನಾಗಲಿ ಕೃಷ್ಣ ಅಲ್ಲಿ ಇದ್ದೇ ಇದ್ದಾನೆ. ಆದರೆ ಎಲ್ಲೂ ಆತ ತಾನು ಹಿಡಿದಿರುವ ಲಗಾಮನ್ನು ಬಿಟ್ಟಿಲ್ಲ; ಭಕ್ತರು ಉದ್ಧಾರವಾಗಿದ್ದಾರೆ. ಕುಮಾರವ್ಯಾಸನಿಗೆ ತನ್ನ ಕೃತಿ "ಹರಿಕಥಾಮೃತವೆಂಬ ಭಾರತ" ವಾಗಿದ್ದರೆ ಲಕ್ಷ್ಮೀಶನಿಗೆ ಈ ಕೃತಿ ಆತನೇ ಹೇಳಿಕೊಂಡಿರುವಂತೆ "ಶ್ರೀ ಕೃಷ್ಣಚರಿತಾ ಮೃತಂ" ಆಗಿದೆ. ಇಷ್ಟಾದರೂ ಇಲ್ಲಿಯ ಚಂಡಿ ಚಂಡಿಯಾಗಿಯೆ ಇದ್ದಾಳೆ. ಭೀಮ ಭೀಮನೇ ಆಗಿದ್ದಾನೆ. ಸುಧನ್ವ, ತಾಮ್ರಧ್ವಜ,

ದುಷ್ಟಬುದ್ಧಿ ಮೊದಲಾದವರೆಲ್ಲ ತಮ್ಮ ವಿಶಿಷ್ಟ ಸ್ವಭಾವಗಳಿಂದ ಕೂಡಿದ ಭಿನ್ನಭಿನ್ನ ವ್ಯಕ್ತಿಗಳೇ ಆಗಿ ಉಳಿದಿದ್ದಾರೆ. ಶ್ರೀ ಕೃಷ್ಣನ ಪ್ರಭಾವಳಿ ಮಿಕ್ಕ ಪಾತ್ರಗಳ ಬಣ್ಣಗಳನ್ನು ಮಂಕುಮಾಡಿಲ್ಲ; ಮತ್ತಷ್ಟು ಹೊಳಪುಗೊಳಿಸಿದೆ. ಗಂಡು ಪಾತ್ರಗಳಲ್ಲಿ ಭೀಮ, ಅರ್ಜುನ, ಲವಕುಶರು, ಬಭ್ರುವಾಹನ, ಹಂಸಧ್ವಜ, ನೀಲಧ್ವಜ, ಯೌವನಾಶ್ವ, ತಾಮ್ರಧ್ವಜರೆಲ್ಲ ಶೂರರೂ ಭಕ್ತರೂ ಆಗಿದ್ದರೂ ಒಬ್ಬೊಬ್ಬರ ವ್ಯಕ್ತಿತ್ವವೂ ಬೇರೆಬೇರೆಯೆನ್ನಿಸುವಷ್ಟು ವಿಶಿಷ್ಟವಾಗಿವೆ. ತಾಮ್ರಧ್ವಜನನ್ನು ಶ್ರೀ ಕೃಷ್ಣ ಗೆದ್ದ ರೀತಿ ಒಂದು ಬಗೆಯದಾದರೆ ಸುಧನ್ವನನ್ನು ಶ್ರೀ ಕೃಷ್ಣ ಉದ್ಧರಿಸಿದ ರೀತಿ ಮತ್ತೊಂದು ತೆರನಾಗಿದೆ. ಯಮನ ಮಾವನಾದ ವೀರವರ್ಮನನ್ನು ಶ್ರೀ ಕೃಷ್ಣ ಅರ್ಜುನನ ಜೊತೆ ನಿಂತು ಒಲಿಸಿಕೊಂಡ ರೀತಿಯೇ ಬೇರೆ. ಹೀಗಾಗಿ ಅಶ್ವವನ್ನು ಬಂಧಿಸಿದ ಒಬ್ಬೊಬ್ಬ ಭಕ್ತವೀರನೂ ಒಂದೊಂದು ರೀತಿಯ ಭಿನ್ನತೆಯನ್ನು ತೋರುತ್ತಾನೆ. ಕೇವಲ ವೀರರು ಮತ್ತು ಭಕ್ತರನ್ನು ಮಾತ್ರ ಒಳಗೊಂಡ ಲೋಕವೇ ಅಲ್ಲ ಇದು. ಇಲ್ಲಿ ಬಜಾರಿಯಾದ ಹೆಂಡತಿಯ ಕೈಯಲ್ಲಿ ನರಳಿದ ಉದ್ದಾಲಕನಂಥವರ ಪಾತ್ರಗಳೂ ಇವೆ.

ಸ್ತ್ರೀ ಪಾತ್ರಗಳ ದೃಷ್ಟಿಯಿಂದಲೂ ಈ ಕಾವ್ಯದ ಸೊಗಸು ಬಹುಮುಖವಾದುದು. 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಎಂದು ತನ್ನನ್ನು ಕಾಡಿಗಟ್ಟಿದ ಶ್ರೀ ರಾಮನನ್ನೂ ನಿರ್ದೋಷಿಯಾಗಿ ಕಾಣುವ ನಿರ್ಮಲಚಿತ್ತದ ಸೀತೆ. ನೀಲಧ್ವಜ ಹರಿಗೊಲಿದು ಸೋಲೊಪ್ಪಿ ಯಜ್ಞದ ಅಶ್ವವನ್ನೊಪ್ಪಿಸಿದಾಗ ಗಂಡನೊಡನೆ ಮುನಿದು, ಮನೆಬಿಟ್ಟು, ಸೋದರನ ಮೂಲಕ ಅರ್ಜುನನೊಡನೆ ಕಾಳಗಕ್ಕೆ ಪ್ರಯತ್ನಿಸಿ ಅಲ್ಲಿಯೂ ಸೋತು ಹತಾಶಳಾಗಿ ಕೊನೆಗೆ ಗಂಗೆಯನ್ನು ಕೆರಳಿಸಿ ಅರ್ಜುನನಿಗೆ ಮುಂದೆ ಸಾವು ತರುವ ಶಾಪದ ಬಾಣವಾದ ವಿಚಿತ್ರವಾದ ಸೇಡಿನ ಮನೋ

ಭಾವದ ಪತ್ನಿ ಜ್ವಾಲೆ, 'ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು' ಎನ್ನುವಂತೆ ಗಂಡನು ಹೇಳಿದ್ದಕ್ಕೆಲ್ಲ ಪ್ರತಿಹೇಳುವ ವಿಶಿಷ್ಟ ಚಂಡಿ ಸ್ವಭಾವದ ಉದ್ದಾಲಕನ ಮಡದಿ ಚಂಡಿ, ಅತ್ಯಂತ ಮುಗ್ಧಸ್ವಭಾವದವಳೂ, ಕೋಮಲೆಯೂ ಆದ ವಿಷಯೆ, ಚಿತ್ತಾಕರ್ಷಕಳಾದ ಸುಧನ್ವನ ಮಡದಿ, ಸ್ತ್ರೀರಾಜ್ಯದ ಒಡತಿಯಾದ ಪ್ರಮೀಳೆ, ಪತಿಪರಾಯಣೆಯರಾದ ಉಲೂಪಿ ಚಿತ್ರಾಂಗದೆಯರು, ಇವರೆಲ್ಲರೂ ಒಂದೊಂದು ಬಗೆ. ಗಂಡು ಪಾತ್ರಗಳು ಹೇಗೋ ಹಾಗೆಯೇ ಹೆಣ್ಣು ಪಾತ್ರಗಳೂ ಕೂಡ ವೈವಿಧ್ಯದಿಂದ ಕೂಡಿದ್ದು ಕಾವ್ಯದ ಸ್ವಾದವನ್ನು ಹೆಚ್ಚಿಸಿವೆ.

ಇಲ್ಲಿನ ಲೋಕವೂ ಹದವಾದುದು. ಭಕ್ತಿಗೆ ಮೆಚ್ಚಿ ಭಕ್ತರಿಗೆ ಸೋಲುವ ಕೃಷ್ಣ ಒಂದು ಕಡೆಯಾದರೆ ಇನ್ನೊಂದು ಕಡೆ ಭಕ್ತಿ ಗೌರವಗಳಿಗೆ ಸೋಲುವ ಶೂರಧೀರ ವಿನಮ್ರರು. ಈ ಶೂರರು ಹರಿಯೊಡನೆ ಯುದ್ಧಮಾಡುವ ಸಾಮರ್ಥ್ಯವಿದ್ದರೂ ಕೊನೆಗೆ ಭಕ್ತಿಗೌರವಗಳಿಗೆ ಇವರು ಸೋಲುತ್ತಾರೆ. ಅಂತಹ ವೀರ ಧೀರ ಭಕ್ತರು ಇಲ್ಲಿಯ ಬಹುಪಾಲು ವ್ಯಕ್ತಿಗಳು. ಯಮನನ್ನೇ ಅಳಿಯನನ್ನಾಗಿ ಮಾಡಿಕೊಂಡ ವೀರವರ್ಮ, ಅಗ್ನಿಯನ್ನು ಅಳಿಯನನ್ನಾಗಿ ಮಾಡಿಕೊಂಡ ನೀಲಧ್ವಜ, ಮೂಲಾನಕ್ಷತ್ರದಲ್ಲಿ ಹುಟ್ಟಿ ತಬ್ಬಲಿಯಾದರೂ ಹರಿಕೃಪೆಯಿಂದ ಸಕಲ ಸಂಕಟಗಳನ್ನು ದಾಟಿದ ಭಕ್ತಮುಗ್ಧ ಅದೃಷ್ಟಶಾಲಿ ಚಂದ್ರಹಾಸ, ಶೃಂಗಾರ ಮತ್ತು ವೀರಗಳೆರಡರಲ್ಲಿಯೂ ಅಪೂರ್ವ ವ್ಯಕ್ತಿತ್ವದಿಂದ ಕಂಗೊಳಿಸುವ ಸುಧನ್ವ, ಅತ್ಯಂತ ವಿನಯಶಾಲಿಯೂ ವೀರನೂ ಆದ ಅರ್ಜುನ (ಬಭ್ರುವಾಹನನನ್ನು ಹಂಗಿಸುವಲ್ಲಿ ಮಾತ್ರ ಈತ ಸ್ವಲ್ಪ ಒರಟಾಗುತ್ತಾನೆ), ಇವರೆಲ್ಲರೂ ಇರುವ ಈ ಲೋಕ ಜೈಮಿನಿ-ಲಕ್ಷ್ಮೀಶರ ಲೋಕ.

ಅಶ್ವಮೇಧದ ಕಥೆಯೆಂದರೆ ಕುದುರೆ ಓಡಿದುದು, ರಾಜರದನ್ನು ಬಂಧಿಸಿದುದು, ಅನಂತರ ಪಾಂಡವರು ಕುದುರೆ ಹಿಡಿದವರನ್ನು ಯುದ್ಧದಲ್ಲಿ ಸೋಲಿಸಿ ಮತ್ತೆ ಮುಂದುವರಿದದ್ದು -ಹೀಗೆ ಬರೀ ಯುದ್ಧದ ಕಥೆಯಾಗಿಲ್ಲ ಈ ಜೈಮಿನಿ ಭಾರತ. ಕುದುರೆಯನ್ನು ಹಿಂಬಾಲಿಸಿದ ಅರ್ಜುನ ಸ್ತ್ರೀರಾಜ್ಯವೊಂದರಲ್ಲಿ ಸಿಕ್ಕಿಬೀಳುತ್ತಾನೆ. ಅಲ್ಲಿ ಬರುವ ಸ್ತ್ರೀಯರ ರಾಜ್ಯದ ಒಡತಿಯಾದ ಪ್ರಮೀಳೆಯದೇ ಒಂದು ರೀತಿಯ ಕಥೆ. ಚಂದ್ರಹಾಸನ ಕಥೆಯಂತೂ ಯಜ್ಞದ ಕುದುರೆಯನ್ನು ತಡೆದ ವೀರನನ್ನು ಕುರಿತದ್ದಾದರೂ ಆತನ ಇಡೀ ಜೀವನದ ಕಥೆ ಸವಿಸ್ತಾರವಾಗಿರುವ ಸೊಬಗಿನ ಮಡುವಾಗಿದೆ. ಒಂದುಕಡೆ ಅಭ್ಯುದಯದ ಹಂತಗಳನ್ನು ಏರುತ್ತ ಏರುತ್ತ ಹೊರಟ ಹರಿಭಕ್ತ ಚಂದ್ರಹಾಸ. ಮತ್ತೊಂದುಕಡೆ ಅವನನ್ನು ನಾಶಮಾಡಬೇಕೆಂದು ಸಂಚಿನಮೇಲೆ ಸಂಚುಗಳನ್ನು ಹೂಡುತ್ತ ಹೊರಟ ದುಷ್ಟಬುದ್ಧಿ. ಈ ಮಧ್ಯೆ ಅದೃಷ್ಟ ಆಡಿಸುವ ಚೆಂಡುಗಳಂತೆ ಆಡುವ ವಿಷಯೆ ಮದನರು ಇವರುಗಳ ಕಥೆಯ ಸೊಗಸು ಬೇರೆ ರೀತಿಯದು.

ಬಭ್ರುವಾಹನ ಮತ್ತು ಅರ್ಜುನರಿಗೆ ಕಾಳಗವೊದಗಿದಾಗ ಲವಕುಶರು ಮತ್ತು ರಾಮರಲ್ಲಿ ಕಾಳಗವಾದಂತೆ ಈ ಕಾಳಗವೂ ನಡೆಯಿತೆಂದು ರಾಮಾಯಣದ ಸೀತಾ ಪರಿತ್ಯಾಗ ಮತ್ತು ಸೀತಾ ಪರಿಗ್ರಹಗಳ ಪೂರ್ಣಕಥೆಗೆ ಕವಿ ಅವಕಾಶ ಮಾಡಿಕೊಂಡು ಬಿಟ್ಟಿದ್ದಾನೆ. ಅರ್ಜುನನ ಕುದುರೆ ಬಂಡೆಯೊಂದರಲ್ಲಿ ಸಿಕ್ಕಿಕೊಂಡು ಬಿಟ್ಟಿದೆ ಎಂದಾಗ ಉದ್ದಾಲಕ ಮತ್ತು ಚಂಡಿಯರ ಕಥೆಗೆ ಕವಿ ಎಡೆಮಾಡಿಕೊಳ್ಳುತ್ತಾನೆ.

ದೊರೆಯುವ ಯಾವ ಸಂದರ್ಭವನ್ನೂ ಬಿಡದೆ ಚೆನ್ನಾಗಿ ಬಳಸಿಕೊಂಡು ಭಕ್ತಿ ಮತ್ತು ಶೌರ್ಯಗಳಿಗೆ ಮಾತ್ರ ಅವಕಾಶವಾಗ

ಬೇಕಾಗಿದ್ದ ಅಶ್ವಮೇಧಯಾಗದ ಕಥೆಯಲ್ಲಿ ಶೃಂಗಾರ, ಹಾಸ್ಯ, ಅದ್ಭುತ ಮತ್ತು ಕರುಣರಸಗಳನ್ನೂ ತುಂಬಿ ಕಥೆಗಳನ್ನು ಮತ್ತು ಕಾವ್ಯವನ್ನು ರಸಮಯವಾಗುವಂತೆ ಮಾಡಿದ್ದಾನೆ. ಕಥೆಯು ಚೌಕಟ್ಟೂ ಆಕರ್ಷಕವಾಗಿದೆ. ಒಂದು ಕಡೆ ಕುದುರೆಯನ್ನು ಶೂರ ನೊಬ್ಬ ಕದಿಯುತ್ತಾನೆ. ಇನ್ನೊಂದು ಕಡೆ ಕುದುರೆ ಶಾಪದ ಕಾರಣವಾಗಿ ಬಂಡೆಯೊಂದರಲ್ಲಿ ಸಿಕ್ಕಿಕೊಂಡು ಬಿಡುತ್ತದೆ. ಮತ್ತೊಂದು ಕಡೆ ಶ್ರೀ ಕೃಷ್ಣನ ಕೃಪೆಯನ್ನು ಸಂಪಾದಿಸಲೆಂದೇ ಕುದುರೆಯನ್ನು ಬಂಧಿಸಲಾಗುತ್ತದೆ. ಇನ್ನು ಕೆಲವುಕಡೆ ಕುದುರೆ ಯನ್ನು ನೋಡುತ್ತಿದ್ದಂತೆ ಶೂರರು ಅಭಿಮಾನದಿಂದ ಒಮ್ಮೆ, ಹೆದರಿಕೆಯಿಂದ ಇನ್ನೊಮ್ಮೆ ಅಶ್ವದ ಬೆಂಗಾಲಿನವರ ಜೊತೆ ತಾವೂ ಹೊರಟುನಿಲ್ಲುತ್ತಾರೆ. ಹೀಗಾಗಿ ಜೈಮಿನಿ ಭಾರತದ ಕಥೆ ಅತ್ಯಂತ ಆಕರ್ಷಕವಾದ ಕಥೆಯಾಗಿದೆ.

ಜೈಮಿನಿ ಭಾರತವನ್ನು ಕುರಿತು ಇಷ್ಟು ಮಾತುಗಳನ್ನು ಹೇಳು ವಾಗ ಇಲ್ಲಿ ಬರುವ ಪಾತ್ರಗಳ ಚಿತ್ರಣದಲ್ಲಿ, ಘಟನೆಗಳ ನಿರೂ ಪಣೆಯಲ್ಲಿ, ಕಥೆಯನ್ನು ಹೇಳುವ ರೀತಿಯಲ್ಲಿ ಹಾಗೂ ಕಾವ್ಯದ ಸಂವಿಧಾನದಲ್ಲಿ ಲಕ್ಷ್ಮೀಶನಿಗೆ ಸಲ್ಲುವ ಹಿರಿಮೆಯೆಷ್ಟು, ಸಂಸ್ಕೃತದ ಮೂಲಕವಿ ಜೈಮಿನಿಗೆ ಸಲ್ಲಬೇಕಾದ ಗೌರವವೆಷ್ಟು ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.



## 5. ಲಕ್ಷ್ಮೀಶನ ಹಿರಿಮೆ

ಲಕ್ಷ್ಮೀಶನೇನೋ ತನ್ನ ಕಾವ್ಯವನ್ನು ರಚಿಸುವಾಗ ಪೂರ್ಣವಾಗಿ ಸಂಸ್ಕೃತದ ಜೈಮಿನಿಯ ಭಾರತವನ್ನೇ ಮೂಲವಾಗಿಟ್ಟುಕೊಂಡಿದ್ದಾನೆ. ಅಲ್ಲಿ ಬರುವ ಕಥೆಗಳನ್ನೆಲ್ಲ ಹೆಚ್ಚುಕಡಿಮೆ ಬಳಸಿಕೊಂಡೇ ಇದ್ದಾನೆ. ಕಥೆಯ ಹಂದರವನ್ನೂ ಅನುಸರಿಸಿದ್ದಾನೆ. ಅಷ್ಟೇ ಅಲ್ಲ, ಮೂಲದಲ್ಲಿ ಸೊಗಸಾಗಿರುವ ಕಾವ್ಯಾಭಿವ್ಯಕ್ತಿಗಳನ್ನೂ, ಪಾತ್ರಗಳ ವೈಶಿಷ್ಟ್ಯ ವೈವಿಧ್ಯಗಳನ್ನೂ ಪೂರ್ಣವಾಗಿ ಬಳಸಿಕೊಂಡಿದ್ದಾನೆ. ಚೆಲುವಾದ ಉಪಮೆಗಳನ್ನು ಮತ್ತು ಸೂಕ್ತಿಗಳನ್ನು ಕೂಡ ಅನುವಾದಿಸಿದ್ದಾನೆ. ಆದ್ದರಿಂದ ಮೂಲಕಥೆಯ ಸೊಗಸುಗಳು ಲಕ್ಷ್ಮೀಶನಲ್ಲಿಯೂ ಮೂಡಿವೆ ಎಂದು ಹೇಳಬೇಕು. ಕೊನೆಗೆ ಲಕ್ಷ್ಮೀಶ ಮೂಲದ ಕೃತಿಗೆ ಬಹಳ ಋಣಿಯಾಗಿದ್ದಾನೆ ಎಂದೂ ಒಪ್ಪಿಕೊಳ್ಳಬೇಕು. ಇಷ್ಟನ್ನು ಹೇಳಿದಾಗ ಲಕ್ಷ್ಮೀಶ ಕೇವಲ ಅನುವಾದಕಾರನಾಗಿದ್ದಾನೆ ಎಂದುಬಿಟ್ಟರೆ ಲಕ್ಷ್ಮೀಶನಿಗೆ ಅಪಚಾರವಾಗುತ್ತದೆ; ಅಂದರೆ ಆತನ ಪ್ರತಿಭೆಗೆ ದ್ರೋಹಬಗೆದಂತಾಗುತ್ತದೆ.

ವಾಸ್ತವವಾಗಿ ಅನುವಾದಕಾರರೆಂದರೆ ಕೊಲೆಪಾತಕರೆಂಬ ಅರ್ಥದ ಮಾತೊಂದಿದೆ. ಪ್ರತಿಭೆಯಿಲ್ಲದೆ ಅನುವಾದಿಸಲು ಹೊರಟ ನೀರಸರನ್ನು ಕುರಿತು ಷೆಲ್ಲಿ ಕವಿ ಹೇಳಿರುವ ಮಾತು ಅದು.

ಕನ್ನಡ ಕವಿಗಳ ಪರಂಪರೆಯನ್ನು ನೋಡಿದರೆ ಎರಡು ರೀತಿಯಲ್ಲಿ ಮೂಲಕೃತಿಗಳನ್ನು ಅನುಸರಿಸಿರುವ ಕವಿಗಳು ಪ್ರಧಾನವಾಗಿ ಕಾಣುತ್ತಾರೆ. ಪಂಪ ಕುಮಾರವ್ಯಾಸರಂಥ ದೊಡ್ಡ ಕವಿಗಳು ತಮ್ಮ ಕಣ್ಣೆದುರಿಗೆ ಮೂಲ ವ್ಯಾಸಭಾರತವನ್ನೆ ಇಟ್ಟುಕೊಂಡಿ

ದ್ದರೂ ಅವರ ದೃಷ್ಟಿ ಯಾವುದೇ ಒಂದು ಕಾವ್ಯವನ್ನು ಅನುಸರಿಸುವುದು ಅಲ್ಲ. ರೂಢಿಯಲ್ಲಿರುವ ಕಥಾವಸ್ತುವೊಂದನ್ನು ಆಧಾರವಾಗಿ ಹಿಡಿದು ತಮ್ಮ ಕಾವ್ಯೋದ್ದೇಶ ಮತ್ತು ಪ್ರತಿಭೆಗಳಿಗೆ ತಕ್ಕಂತೆ ಮೂಲಕಥೆಯನ್ನೂ ಪಾತ್ರಸನ್ನಿವೇಶಗಳನ್ನೂ ಬದಲಾಯಿಸಿ, ಹಿಗ್ಗಿಸಿ, ಕುಗ್ಗಿಸಿ, ತಮ್ಮದೇ ಆದ ವ್ಯಕ್ತಿತ್ವದ ಎರಕದಿಂದ ಅವನ್ನು ಪುನರ್‌ಸೃಷ್ಟಿಸುವುದು ಅವರ ರೀತಿ. ಅವರ ರೀತಿ ಪೂರ್ಣ ಸ್ವತಂತ್ರ ರೀತಿ. ಲಕ್ಷ್ಮೀಶ ಕವಿ ಮೂಲಕಾವ್ಯದ ಯಾವ ಸೊಗಸಾದ ಅಂಶವನ್ನೂ ವಿಶೇಷತಃ ಬಿಡದಂತೆ ಅನುಸರಿಸಿರುವುದರಿಂದ ಈತ ಪಂಪ ಕುಮಾರವ್ಯಾಸರ ವರ್ಗಕ್ಕೆ ಸೇರುವುದಿಲ್ಲ.

ಮೂಲವಾಗಿ ಕಾವ್ಯವೊಂದನ್ನು ಇಟ್ಟುಕೊಂಡು ಅದನ್ನು ಪುನಸ್ಸೃಷ್ಟಿಯೆಂಬಂತೆ ರಚಿಸಿದ ಕವಿಗಳ ಇನ್ನೊಂದು ಗುಂಪಿದೆ. ನಾಗವರ್ಮ ಮತ್ತು ಜನ್ನರು ಈ ಗುಂಪಿನವರು. 'ಗದ್ಯಂ ಕವೀನಾಂ ನಿಕಷಂ ವದನ್ತಿ' ಎಂದ ಬಾಣಭಟ್ಟನ ಗದ್ಯಕಾವ್ಯ ಕಾದಂಬರಿಯನ್ನು ಚಂಪೂಶೈಲಿಯಲ್ಲಿ ಮತ್ತೆ ಸೃಷ್ಟಿಸಿದ ನಾಗವರ್ಮ, ವಾದಿರಾಜರ ಸಂಸ್ಕೃತ ಯಶೋಧರ ಚರಿತ್ರೆಯನ್ನು ಕನ್ನಡದಲ್ಲಿ ತನ್ನದೇ ಆದ ಸ್ವಂತ ಕಾವ್ಯವೆಂಬಂತೆ ಅನುವಾದಿಸಿದ ಜನ್ನ ಇವರುಗಳು ಅನುವಾದಗಳು ಸ್ವಂತಸೃಷ್ಟಿಗೆ ಸಮವೆನ್ನುವಂಥ ಸಾಧನೆಮಾಡಿ ತೋರಿಸಿದ್ದಾರೆ. ಲಕ್ಷ್ಮೀಶ ಎರಡನೆಯ ಗುಂಪಾದ ನಾಗವರ್ಮ ಮತ್ತು ಜನ್ನರ ವರ್ಗಕ್ಕೆ ಸೇರಿದ ದೊಡ್ಡ ಕಲಾವಿದನಾಗಿದ್ದಾನೆ. ಇವನ ಅನುವಾದ ಮೂಲದ ಶಬ್ದಕ್ಕೆ ಕನ್ನಡದ ಶಬ್ದ ಎಂಬಂತೆ ಮಕ್ಕಿ-ಕಾ-ಮಕ್ಕಿಯಾಗಿಲ್ಲ. ಮೂಲಕಾವ್ಯದ ಸೊಗಸನ್ನು ಬಿಟ್ಟುಕೊಡದೆ, ಆದರೆ ಅಪ್ರಾಸಂಗಿಕವಾದ ವಿವರಗಳನ್ನು ತೆಗೆದು, ಉಚಿತವೆನ್ನುವಲ್ಲಿ ಸ್ವಂತ ಪ್ರತಿಭೆಯಿಂದ ಮೂಲದ ಕಥೆಗೆ ಹಾಗೂ ಪಾತ್ರಗಳಿಗೆ ವಿಶೇಷವಾದ ಸೊಗಸು ಮತ್ತು ಸತ್ವಗಳು ಕೂಡಿ

ಬರುವಂತೆ ಮಾಡಿರುವ ಕಾವ್ಯರಚನಾಮಾರ್ಗ ಈತನದು. ಈತನ ಬರೆವಣಿಗೆ ಅನುವಾದದಂತೆ ಇರದೆ ಕನ್ನಡದಲ್ಲಿ ಹೇಳಿದ ಸ್ವಂತ ಕಥೆಯೆಂಬ ರೀತಿಯ ಬಣ್ಣ ಮತ್ತು ಬೆಲೆಗಳನ್ನು ಪಡೆದಿದೆ.

ಲಕ್ಷ್ಮೀಶನ ಸ್ವಂತಿಕೆಯಿರುವುದು ಮೊದಲು ಆತನ ಸಂಗ್ರಹ ಗುಣದಲ್ಲಿ. ಹೀಗೆ ಮೂಲಕೃತಿಯನ್ನು ಸಂಗ್ರಹಿಸುವಾಗ ಔಚಿತ್ಯ ಪ್ರಜ್ಞೆ ಲಕ್ಷ್ಮೀಶನಲ್ಲಿ ವಿಶೇಷವಾಗಿ ಜಾಗೃತವಾಗಿರುತ್ತದೆ. ಸಂಸ್ಕೃತ ಮೂಲದಲ್ಲಿ ಅತಿ ದೀರ್ಘವಾಗಿರುವ ಅಶ್ವಲಕ್ಷಣ ವಿವರಗಳನ್ನೂ, ವ್ಯಾಸನ ಉಪದೇಶ ಮತ್ತು ವಾಲ್ಮೀಕಿ ಮಹರ್ಷಿಗಳ ಆಶ್ರಮದ ವರ್ಣನೆಯ ಅತಿವಿವರಗಳನ್ನೂ ಲಕ್ಷ್ಮೀಶ ಬಹಳವಾಗಿ ಸಂಗ್ರಹಿಸಿದ್ದಾನೆ. ಲವಕುಶರ ಉಪಾಖ್ಯಾನದಲ್ಲಿ ಬರುವ ಸೀತಾದೇವಿಯ ಸೀಮಂತ, ಲವಕುಶರ ಉಪನಯನೋತ್ಸವಗಳ ವಿವರಗಳನ್ನೂ ಸಂಗ್ರಹಮಾಡಿದ್ದಾನೆ. ಇದರಿಂದ ಕಥೆಯ ವೇಗ ಹೆಚ್ಚಿದೆ. ಉಪಯುಕ್ತವಲ್ಲದ ಆದರೆ ಕಾವ್ಯದ ಸ್ವಾರಸ್ಯವನ್ನು ನೀರುಜೊಳ್ಳು ಮಾಡುವಂತಹ ಕೆಲವು ವರ್ಣನೆಗಳನ್ನು ಪೂರ್ಣವಾಗಿ ಕೈಬಿಟ್ಟಿದ್ದಾನೆ. ರೋಗಗಳು ಹುಟ್ಟುವುದಕ್ಕೆ ಕಾರಣಗಳೇನು? ಅವುಗಳನ್ನು ನಿವಾರಣೆ ಮಾಡುವ ರೀತಿಗಳಾವುವು? ಎಂಬ ವಿವರಗಳು, ಕಾಶಿ ಮಹಿಮೆಯ ವಿವರಗಳು, ಯುದ್ಧಕ್ಕೆ ಸೈನಿಕರು ಹೊರಡುವಾಗ ತಮ್ಮ ಪತ್ನಿಯರೊಡನೆ ನಡಸುವ ಸಲ್ಲಾಪ ಸಂಭಾಷಣೆಗಳ ವಿವರಗಳು, ಸಂಸಾರದ ಅನಿತ್ಯತೆಯನ್ನು ವರ್ಣಿಸುವ ತಾತ್ವಿಕ ಬೋಧೆ, ಶ್ರೀಹರಿಯನ್ನು ಒಲಿಸಿಕೊಳ್ಳಲು ಆಚರಿಸಬೇಕಾದ ವ್ರತಾಚರಣೆಗಳು. ತುಳಸೀಮಾಲಾ ಮಾಹಾತ್ಮ್ಯ–ಇಂಥ ನೀರಸ ವಿವರಗಳನ್ನು ಲಕ್ಷ್ಮೀಶ ಬಿಡುವಲ್ಲಿ ಔಚಿತ್ಯಪ್ರಜ್ಞೆ ಹಾಗೂ ಕಾವ್ಯ ದೃಷ್ಟಿಗಳು ಅತ್ಯಂತ ಪ್ರಮುಖವಾಗುತ್ತವೆ. ಇಷ್ಟು ಸಾಲದು ಎನ್ನುವಂತೆ ಲಕ್ಷ್ಮೀಶನು ಮೂಲದಲ್ಲಿ ಬರುವ 'ಜೈಮಿನಿ ಹೇಳಿದನು, ರಾಮ ಹೇಳಿದನು. ಲಕ್ಷ್ಮಣ ಹೇಳಿದನು. ಭರತ ಹೇಳಿ

ದನು, ಸತ್ಯಭಾಮೆ ಹೇಳಿದಳು, ಚಂಡಿ ಹೇಳಿದಳು' – ಇಂಥ ಉವಾಚ ಶೈಲಿಯನ್ನು ಬಿಟ್ಟು ಹುಟ್ಟುಕತೆಗಾರನಂತೆ ಕಥೆಯನ್ನು ಹೇಳಿಕೊಂಡು ಹೋಗುತ್ತಾನೆ. ಪ್ರತಿಯೊಂದು ಕಥೆಯನ್ನು ಹೇಳುವಾಗಲೂ 'ಆದೊಡೆ ನರೇಂದ್ರ ಕೇಳಾದಿಯುಗದಂದು ವಿಮಲಾದಿತ್ಯವಂಶದೊಳ್ ಮೆರೆದಿಕ್ಷ್ವಾಕು ಮೊದಲಾದವರ್,' 'ಆಲಿಸಿನ್ನಾದೊಡಲೆ ಭೂಪ ನೀಲಧ್ವಜಂ ಜ್ವಾಲೆಯೆಂಬರಸಿಯೊಳ್ ಸ್ವಾಹಾಭಿಧಾನದಿಂ ತನುಜೆಯಂ ಪಡೆದಂ' 'ಸತ್ಸಂಗತಿಯನಾಲಿಸಿನ್ನೆಲೆ ಮಹೀಶ್ವರ' ಎಂಬ ಮಾತುಗಳನ್ನೇನೊ ಈತ ಬಳಸುತ್ತಾನೆ. ಆದರೆ ಈ ಬಗೆ ಕಥೆ ಹೇಳುವವನ ರೀತಿ: ಕೇಳುವವರು ಹೂಗುಟ್ಟುವಂತೆ ಮಾಡುವ ರೀತಿ. ಕಥೆಯನ್ನಾರಂಭಿಸುವ ರೀತಿ ಇವನಲ್ಲಿಯೂ ಅತ್ಯಂತ ವಿನೂತನವಾಗೇನೂ ಇಲ್ಲ ಎಂದು ಹೇಳಬಹುದಾದರೂ ಅನಾವಶ್ಯಕವಾಗಿ ಮಧ್ಯೆ ಮಧ್ಯೆ ಬರುವ ಇವರು ಹೇಳಿದರು ಅವರು ಹೇಳಿದರು ಎಂಬ ತೊಡಕನ್ನಂತೂ ಈತ ನಿವಾರಿಸಿಕೊಂಡಿದ್ದಾನೆ. ಲಕ್ಷ್ಮೀಶ ಹುಟ್ಟುಕಥೆಗಾರನಾಗಿರುವುದರಿಂದಲೇ ಇವು ಈತನಿಗೆ ಸಾಧ್ಯವಾಗಿವೆ. ನೀರಸ ವಿವರಗಳನ್ನು ಬಿಡುವುದು, ವಿಸ್ತಾರವಾಗಿರುವುದನ್ನು ಸಂಗ್ರಹಿಸುವುದು, ತೊಡಕಾಗುವ ಅವನು ಹೇಳಿದನು ಇವನು ಹೇಳಿದನು ಎಂಬ ಮಾತುಗಳನ್ನು ನಿವಾರಿಸುವುದು ಇವುಗಳ ಹಿನ್ನೆಲೆಯಲ್ಲಿ ಈತನ ಕಥನಕಲೆ ಮಿಂಚುತ್ತದೆ.



ಲಕ್ಷ್ಮೀಶ ಕೆಲವು ವೇಳೆ ಮೂಲದ ಕಥಾವಿವರಗಳನ್ನು ಪೂರ್ಣವಾಗಿ ಕೈಬಿಡದೆ ತೇಲಿಸಿಕೊಂಡು ಹೋಗುತ್ತಾನೆ. ವೃಷಕೇತುವಿನ ಪಶ್ಚಾತ್ತಾಪ, ಪ್ರದ್ಯುಮ್ನ ಸತ್ಯಭಾಮೆಯರ ಮೂದಲಿಕೆಯಂಥ ಪ್ರಸಂಗಗಳು ಉಚಿತವಾಗದೆ ಹೋಗುವುದರಿಂದ ಅವನ್ನು ಈತ ತೇಲಿಸಿದ್ದಾನೆ. ಇಲ್ಲೆಲ್ಲ ಈತನ ಕಾವ್ಯದ ರುಚಿ ವೇದ್ಯವಾಗುತ್ತದೆ ನಮಗೆ.

ಲಕ್ಷ್ಮೀಶ ಮೂಲಕಥೆಯಲ್ಲಿ ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿರುವುದುಂಟು. ಉದಾಹರಣೆಗೆ ಬಭ್ರುವಾಹನ ಕುದುರೆಯ ಹಣೆಯ ಮೇಲಿನ ಪಟದ ಲಿಪಿಯನ್ನು ಓದಿ ತನಗೂ ಅರ್ಜುನನಿಗೂ ಇರುವ ಸಂಬಂಧವನ್ನು ತಿಳಿದುಕೊಂಡು ಕುದುರೆಯನ್ನು ಅರ್ಜುನನಿಗೆ ಹಿಂದಿರುಗಿಸಿದನೆಂದು ಜೈಮಿನಿಯಲ್ಲಿದೆ. ಲಕ್ಷ್ಮೀಶನಲ್ಲಾದರೆ ಕುದುರೆಯನ್ನು ಕಟ್ಟಿದ ವಿಷಯವನ್ನು ತಿಳಿದ ತಾಯಿ ತಾನೇ ಮಗನ ಬಳಿಗೆ ಬಂದು ತನ್ನ ಮತ್ತು ಅರ್ಜುನರ ಸಂಬಂಧವನ್ನು ತಿಳಿಸಿ ಹೇಳಿದಮೇಲೆ ವಿವೇಕಮೂಡಿ ಬಭ್ರುವಾಹನ ಕುದುರೆಯನ್ನು ಹಿಂದಿರುಗಿಸಲು ಅರ್ಜುನನ ಬಳಿಗೆ ಹೋದನೆಂದು ಚಿತ್ರಿಸಲಾಗಿದೆ. ಈ ವ್ಯತ್ಯಾಸದಿಂದ ಲಕ್ಷ್ಮೀಶ ಹೇಳುವ ಕಥೆ ಹೆಚ್ಚು ಸಹಜವೂ ಸ್ವಾರಸ್ಯಮಯವೂ ಆಗುತ್ತದೆ. ಏಕೆಂದರೆ ತಾನೇ ಕಟ್ಟಿದ ಕುದುರೆಯ ಹಣೆಪಟ್ಟಿಯ ಬರಹವನ್ನು ಓದುವವರೆಗೆ ಯುದ್ಧಸಿದ್ಧತೆಯಲ್ಲಿ ಬಭ್ರುವಾಹನನಿದ್ದನೆಂಬುದು ಆತನ ವ್ಯಕ್ತಿತ್ವಕ್ಕೆ ಬೆಲೆತರುವ ವಿಷಯವೇನೂ ಅಲ್ಲ. ಅಲ್ಲದೆ ತಾನೇ ತನ್ನ ತಂದೆಯನ್ನು ಕುದುರೆಯ ಹಣೆಪಟ್ಟಿಯ ಬರೆಹದಿಂದ ಗುರುತಿಸಿಕೊಂಡ ಯಾವ ಮಗತಾನೇ – ತನ್ನ ತಂದೆ ತನ್ನನ್ನೆಷ್ಟೇ ಮೂದಲಿಸಲಿ – ತಂದೆಯನ್ನೇ ಕೊಲ್ಲುವಂಥ ಕಾರ್ಯ ಮಾಡಬಲ್ಲ? ಲಕ್ಷ್ಮೀಶನ ಬದಲಾವಣೆಯಿಂದ ಮಗನು ಕುದುರೆಯನ್ನು ಹಿಂದಿರುಗಿಸಲು ಒಪ್ಪಿದ ರೀತಿ ಹೆಚ್ಚು ಸಹಜವಾಗುತ್ತದೆ. ತಾಯ ಮಾತಿನಿಂದ ತಂದೆ ಯಾರೆಂದು ತಿಳಿಯುವುದು ಬೇರೆ. ತಾನೇ ತಂದೆಯನ್ನು ಗುರುತಿಸಿಕೊಂಡು ಗೌರವಿಸುವುದು ಬೇರೆ ತಾನೆ? ಹಾಗೆ ನೋಡಿದರೆ ತಾಯಮಾತಿಗೊಪ್ಪಿ ಕುದುರೆಯನ್ನೊಪ್ಪಿಸಲು ಅರ್ಜುನನ ಬಳಿಗೆ ಹೋದಾಗ ಅರ್ಜುನನ ಮೂದಲಿಕೆಗಳಿಂದ ಬಭ್ರುವಾಹನನ ಹುಡುಗು ಬುದ್ಧಿಯ ಕ್ಷಾತ್ರ ಬುಸುಗುಟ್ಟುತ್ತದೆ. ಈ ಕೋಪದ ಹಿನ್ನೆಲೆಯಲ್ಲಿ ತನ್ನ ತಾಯಿಯನ್ನು ಅರ್ಜುನ

ತಾತ್ಸಾರ ಮಾಡುವನಲ್ಲ ಎಂಬ ಆಗ್ರಹವೂ ಹುಟ್ಟುತ್ತದೆ. ಇಲ್ಲಿಯೂ ಒಂದು ತೊಡಕಿನ ಪ್ರಶ್ನೆ ನಮ್ಮನ್ನು ಕಾಡಬಹುದು. ಜೈಮಿನಿ ಲಕ್ಷ್ಮೀಶ ಇಬ್ಬರಲ್ಲೂ ಅರ್ಜುನನ ಮಾತಿನಲ್ಲಿ ತಾಯನ್ನು ತಂದೆ ಮೂದಲಿಸುವ ಸಮಾನ ಅಂಶವೇ ಇದೆಯಲ್ಲ ಅನ್ನಿಸ ಬಹುದು. ತಾನೇ ತಂದೆಯನ್ನು ಗುರುತಿಸಿಕೊಂಡಾಗ ಮಗ ವರ್ತಿಸಲು ಸಿದ್ಧನಾಗುವ ರೀತಿಗೂ ತಾಯಿಯಿಂದ ತಂದೆಯನ್ನು ತಿಳಿದುಕೊಂಡಾಗ ಮಗ ತಂದೆಯೊಡನೆ ವರ್ತಿಸುವ ರೀತಿಗೂ ನಿಜವಾಗಿ ವ್ಯತ್ಯಾಸವಿದೆ. ಅಲ್ಲದೆ ಮಗ ತಂದೆಯನ್ನು ಕಾಣು ತ್ತಿರುವುದು ಮೊದಲಬಾರಿಗೆ, ಅದೂ ಅಪರಿಚಿತನಾಗಿ. ಈ ಹಿನ್ನೆಲೆಯಿಂದ ನೋಡಿದರೆ ಲಕ್ಷ್ಮೀಶ ಮಾಡಿಕೊಂಡ ಬದಲಾ ವಣೆಯಿಂದ ಕಥೆಯನ್ನು ಹೇಳಿದ ರೀತಿ ಹೆಚ್ಚು ಸಹಜವಾದುದು ಎಷ್ಟು ನಿಜವೋ ಅಷ್ಟೇ ಚಿತ್ರಾಂಗದೆಯ ಪಾತ್ರವೂ ಮುಖ್ಯ ವಾದುದಾಗುತ್ತದೆ. ಚಿತ್ರಾಂಗದೆಯ ವ್ಯಕ್ತಿತ್ವದಲ್ಲಿ ತಪಸ್ವಿನಿಯ ಗುಣಗಳು ಕಾಣಬರುತ್ತವೆ. ಬಭ್ರುವಾಹನನ ಪಾತ್ರವೇನೂ ಕೀಳಾ ಗುವುದಿಲ್ಲ. ಈತ ಮೂಲಕಥೆಯಲ್ಲಿ ವ್ಯತ್ಯಾಸ ಮಾಡಿಕೊಂಡಿರು ವುದು ಕಡಿಮೆ. ಆದರೆ ವ್ಯತ್ಯಾಸ ಮಾಡಿಕೊಂಡಿರುವ ಕಡೆಗಳಲ್ಲೆಲ್ಲ ಇದೇ ರೀತಿಯ ಕೌಶಲವಿದೆ ಎನ್ನಲಾಗುವುದಿಲ್ಲ, ಉದಾಹರಣೆಗೆ ಮೂಲದಲ್ಲಿ ಲವಕುಶರ ಕಾಳಗದ ಸಂಗತಿ ಬಭ್ರುವಾಹನನ ಯುದ್ಧ ಆರಂಭವಾದ ಮೇಲೆ ಹೇಳಲಾಗಿದೆ. ಲಕ್ಷ್ಮೀಶ ಇಲ್ಲಿ ಲವಕುಶರ ಕಾಳಗವನ್ನು ಬಭ್ರುವಾಹನ ಮತ್ತು ಅರ್ಜುನರ ಕಾಳಗಕ್ಕೆ ಮೊದಲೇ ಹೇಳಿದ್ದಾನೆ. ಆ ಕಥೆಗೆ ಮೊದಲು ಈ ಕಥೆ ಬಂದಂತಾಯಿತು ಅಷ್ಟೇ. ಹೆಚ್ಚಿನ ಯಾವ ಸೊಗಸನ್ನೂ ಔಚಿತ್ಯ ವನ್ನೂ ಇಲ್ಲಿ ಹುಡುಕುವುದಕ್ಕೆ ಸಾಧ್ಯವಿಲ್ಲ.

ಲಕ್ಷ್ಮೀಶನ ಭಾರತವು ಮೂಲಕ್ಕೆ ಹೋಲಿಸಿದರೆ ಸುಮಾರು ಅರ್ಧದಷ್ಟಾಗುತ್ತದೆ. ಮೂಲದಲ್ಲಿ ಅರವತ್ತೆಂಟು ಅಧ್ಯಾಯ

ಗಳಲ್ಲಿ ಹರಡಿಕೊಂಡಿರುವ ಸುದೀರ್ಘ ಕೃತಿಯನ್ನು ಲಕ್ಷ್ಮೀಶ ಕೇವಲ ಮೂವತ್ತನಾಲ್ಕು ಸಂಧಿಗಳಲ್ಲಿ ಅಂದರೆ ಸಾವಿರದ ಒಂಭೈನೂರಏಳು ವಾರ್ಧಕ ಷಟ್ಪದಿಗಳಲ್ಲಿ ಹೇಳಿದ್ದಾನೆ. ಹೀಗೆ ಹೇಳುವಾಗ ಸಾಮಾನ್ಯವಾಗಿ ಮೂಲದ ಸೊಗಸನ್ನು ಬಿಟ್ಟಿಲ್ಲ. ಅದರ ಬದಲು ಮೂಲಕ್ಕೆ ಕಾಂತಿಯೇರುವಂತೆ ಮಾಡಿದ್ದಾನೆ. ನಿಜವಾಗಿ ಈತನ ಸಂಗ್ರಹಗುಣ ಅಭಿನಂದನಾರ್ಹವಾದುದೇ ಸರಿ. ಹೀಗೆನ್ನುವಾಗ ಲಕ್ಷ್ಮೀಶನ ಕಾವ್ಯದಲ್ಲಿ ಅನವಶ್ಯ ವಿವರಗಳೇ ಇಲ್ಲ ಎಂದು ಸತ್ಯಕ್ಕೆ ಮುಖ ತಿರುಗಿಸುವುದೂ ಸಾಧ್ಯವಿಲ್ಲ. ಬಹಳಮಟ್ಟಿಗೆ ಅನವಶ್ಯ ಅಂಶಗಳು ಕಡಿಮೆಯಾಗಿವೆ ಎಂಬರ್ಥದಲ್ಲಿ ಈ ಮಾತನ್ನು ಗ್ರಹಿಸಬೇಕು ಅಷ್ಟೆ. ಉದಾಹರಣೆಗೆ ಲಕ್ಷ್ಮೀಶ ತನ್ನ ಕಾವ್ಯದಲ್ಲಿ ಅಷ್ಟಾದಶ ವರ್ಣನೆಯ ಸಂಕೋಲೆಗೆ ಅಲ್ಲಿ ಇಲ್ಲಿ ಸಿಕ್ಕಿ ಬಿದ್ದಿದ್ದಾನೆಂಬುದನ್ನು ಗುರುತಿಸಬಹುದು. ಕೆಲವು ಕಡೆಗಳಲ್ಲಿ ವರ್ಣನೆ ಚೆಲುವಾಗಿರುವುದೂ ಉಂಟು. ಒಂದೊಂದು ಸಲ ವರ್ಣನೆಯ ಆವೇಶದಲ್ಲಿ ಈ ಕಥೆಯ ಓಟ ಕುಂಟುವುದೂ ಉಂಟು. ಮೂರನೆಯ ಸಂಧಿಯಲ್ಲಿ ಬರುವ ಭದ್ರಾವತಿಯ ವರ್ಣನೆ ಈ ರೀತಿಯದು. ನಲವತ್ತೆರಡು ಷಟ್ಪದಿಗಳಲ್ಲಿ ವಿಸ್ತಾರವಾಗಿ ಹರಡಿಕೊಂಡಿರುವ ಈ ಸಂಧಿಯ ತುಂಬ ಭದ್ರಾವತಿಯ ವರ್ಣನೆಯೇ ತುಂಬಿಕೊಂಡಿದೆ. ಈ ವರ್ಣನೆಯಲ್ಲಿ ಇರುವ ಚಿತ್ರಗಳು ಕಾವ್ಯದ ದೃಷ್ಟಿಯಿಂದ ಅಷ್ಟೇನೂ ಪ್ರಮುಖವಾಗದಂಥವುಗಳು. ಉಪವನ, ಬೆಟ್ಟ, ಕೊಳ, ಹೊಲ ಗದ್ದೆಗಳು, ಒಕ್ಕಲಗಿತ್ತಿಯರು, ನದಿ ಇಂಥ ವಿವರಗಳಿಂದಲೇ ಈ ಭಾಗ ತುಂಬಿಹೋಗಿದೆ. ಕೆಳಗಿನ ಪದ್ಯವನ್ನು ನೋಡಿ:

ಪಾಲ್ವೆಸೆಯೊಳಂಡಿಃದ ಗಿಳಿವಿಂಡನುಬಲೆಯರ್
ಕಾಲ್ವೆಗೆಯಲಾರ್ದು ಕೈಪರೆಗುಟ್ಟುವಂದಲೆಗೆ

ತೇಲ್ದು ಮೇಲುದು ಜಾರೆ ತೋರ್ಪ ಪೊಂಗೊಡಮೊಲೆಯನಂಬುಜದ
ಮುಕುಳಮೆಂದು ॥
ಸೋಲ್ತೆರಗಿ ತಿರುತಿರುಗಿ ಬರುತಿರ್ಪ ತುಂಬಿಗಳ
ಸಾಲ್ವಿವಿಜಗಿರಿಯ ಬಳಸುವ ತಮೋರಾಜಿಯುಂ
ಪೋಲ್ದು ಸಲೆ ಕಂಗೊಳಿಸುತಿರ್ಪುದಾ ಭೂತಲದೊಳೇನೆಂಬೆನಚ್ಚರಿ
ಯನು ॥

ಭದ್ರಾವತಿಯ ಸೊಗಸಿನ ಒಂದಂಶವನ್ನು ಈ ಚಿತ್ರ ಕೊಡುತ್ತದೆ ಯೆಂಬುದು ಕವಿಯ ಗ್ರಹಿಕೆ.

ಹಾಲು ತುಂಬಿರುವ ತೆನೆಗಳ ಮೇಲೆ ಕುಳಿತಿರುವ ಗಿಳಿವಿಂಡು ಗಳನ್ನು ಓಡಿಸಲು ಒಕ್ಕಲುಗಿತ್ತಿಯರು ಗದ್ದಲಮಾಡಿ ಚಪ್ಪಾಳೆ ತಟ್ಟುತ್ತಿದ್ದಾರೆ. ಆಗ ಅವರ ಸೀರೆಯ ಸೆರಗು ಜಾರಿ ಬಂಗಾರದ ಕೊಡಗಳಂತಿರುವ ಮೊಲೆಗಳು ಕಾಣಿಸುತ್ತಿವೆ. ಮನಸೋತ ದುಂಬಿ ಗಳು ಅವುಗಳನ್ನೇ ತಾವರೆಯ ಮೊಗ್ಗುಗಳೆಂದು ಭ್ರಮಿಸಿ ಮೇಲೆರಗುತ್ತಿವೆ. ಈ ಚಿತ್ರ ಮೇರು ಪರ್ವತವನ್ನು ಬಳಸುವ ಕತ್ತಲಿನ ರಾಶಿಯಂತೆ ಮನೋಹರವಾಗಿತ್ತು. ಅದರ ಆಶ್ಚರ್ಯ ವನ್ನು ಏನೆಂದು ಹೇಳಲಿ–ಎನ್ನುತ್ತಾನೆ ಕವಿ.

ಇದೊಂದೇ ಪದ್ಯವಲ್ಲ ಈ ಸಂಧಿಯಲ್ಲಿರುವ ನಲವತ್ತೆರಡು ಪದ್ಯಗಳಲ್ಲಿಯೂ ತುಂಬಿರುವ ಸರಕು ಇಂಥದ್ದೇ. ಕವಿಸಮಯ ನಿಬಿಡವಾದ ಈ ವರ್ಣನೆಗಳು ಯಾವ ಊರಿನ ವಿಷಯಕ್ಕೆ ಬೇಕಾದರೂ ಅನ್ವಯವಾಗುವಷ್ಟು (ಮರುಭೂಮಿ ಪ್ರದೇಶ ಬಿಟ್ಟರೆ!) ಸಾಮಾನ್ಯ, ನಿರ್ವಿಶಿಷ್ಟ. ಇಡೀ ಈ ಸಂಧಿ ಇಂಥ ನೀರಸ ಬರೆವಣಿಗೆಯಿಂದ ಕೂಡಿದೆ. ಭದ್ರಾವತಿಯನ್ನು ವರ್ಣಿಸುವ ಈ ಬರೆವಣಿಗೆಯಲ್ಲಿ ಭದ್ರಾವತಿಯ ಜನ-ಜೀವನಗಳ ಯಾವ ಒಂದು ಗಾಢವಾದ ಅನುಭವದತ್ತಲೂ ಕವಿಯ ದೃಷ್ಟಿ ಹೋಗಿಲ್ಲ.

ಪ್ರಾಯಶಃ ರಾಘವಾಂಕ ಹೇಳುವಂತೆ ಮರಹೋ ಆಲಸ್ಯವೋ ಕಾರಣವಿರಬೇಕು ಇಂಥ ನೀರಸ ರಚನೆಯನ್ನು ಲಕ್ಷ್ಮೀಶ ಮಾಡು ವುದಕ್ಕೆ.

ಋತುಗಳು, ಸೂರ್ಯೋದಯಾಸ್ತಗಳು, ಚಂದ್ರೋದಯ, ಪುಷ್ಪ ಗಳು ಇವುಗಳನ್ನು ಲಕ್ಷ್ಮೀಶ ಅಲ್ಲಲ್ಲಿ ತಾನೇ ಹೊಸದಾಗಿ ವರ್ಣಿ ಸಿದ್ದಾನೆ. 'ಗಗನ ಮಣಿ ಪಶ್ಚಿಮಾಂಗನೆಯ ಬೈತಲೆಯ ರಂಗು ಮಾಣಿಕದಂತೆ ಕಣ್ಗೆ ಕಾಣಿಸುತಿರ್ದುದಸ್ತಗಿರಿ ಮಸ್ತಕದೊಳ್' ಇಂಥ ಚಿತ್ರಗಳು ಆ ಬಗೆಯುವು. ಲಕ್ಷ್ಮೀಶ ಕೆಲವು ಕಡೆಗಳಲ್ಲಿ ಶ್ಲೇಷಾದಿ ಅಲಂಕಾರಗಳಿಗೆ ಸ್ವಲ್ಪ ಮನಸೋತಿದ್ದಾನೆ. 'ಕೊಡೆ ಯೆಂಬರಾತಪತ್ರಮಂ' ಎಂದು ಮೊದಲಾಗುವ ಪದ್ಯಗಳಲ್ಲಿ ಬರುವ ವರ್ಣನೆ ಶುಷ್ಕ ಪಾಂಡಿತ್ಯದಿಂದ ತುಂಬಿದೆ ಅಷ್ಟೆ. ಕವಿ ಪಂಡಿತರ ಮನಸ್ಸನ್ನು ಗೆಲ್ಲುವ ಆಕರ್ಷಣೆಗೂ ಬಲಿಬಿದ್ದಂತೆ ತೋರುತ್ತದೆ. ಕೆಲವುಕಡೆ ಸ್ತ್ರೀವರ್ಣನೆಗೆ ಕೂಡ ಲಕ್ಷ್ಮೀಶ ಮನ ಸೋತಿದ್ದಾನೆ. ಆದರೆ ಇಂಥ ವರ್ಣನೆಗಳು ಸಾಮಾನ್ಯವಾಗಿ ಹಳ ಗನ್ನಡ ಕಾವ್ಯ ಸಂಪ್ರದಾಯದ ಜಡಭಾಗವೆಂಬುದನ್ನು ಮರೆಯ ಲಾಗದು. ಈ ವಿವರಗಳು ಕವಿ ಹೇಳುವ ಕತೆಯಲ್ಲಿ ಅಲ್ಲಿ ಇಲ್ಲಿ ಕ್ವಚಿತ್ತಾಗಿ ಬಂದು ಹೋಗುವಂಥವಾಗಿರುವುದು ನೆಮ್ಮದಿಯ ವಿಷಯ.

ಲಕ್ಷ್ಮೀಶನ ಸಂಗ್ರಹಗುಣ ಮತ್ತು ಔಚಿತ್ಯ ಪ್ರಜ್ಞೆಗಳನ್ನು ಗಮನಿಸಿದ ಮೇಲೆ ಅವನ ಅನುವಾದಿತ ಕೃತಿಯ ವೈಶಿಷ್ಟ್ಯ ವೇನು ಎಂಬುದನ್ನು ತಿಳಿದುಕೊಳ್ಳಲು ಒಂದು ಉದಾಹರಣೆ ಯನ್ನು ನೋಡಬಹುದು.

ಈತ ಸೀತಾಪರಿತ್ಯಾಗ ಮತ್ತು ಸೀತಾಪರಿಗ್ರಹಗಳನ್ನು ಸಾಕಷ್ಟು ವಿಸ್ತಾರವಾಗಿ ಚಿತ್ರಿಸಿದ್ದಾನೆ. ಪ್ರಾಯಶಃ ಸೀತಾಪರಿ

ತ್ಯಾಗದ ಪ್ರಸಂಗವನ್ನು ವಿಶದವಾಗಿ ಗಮನಿಸಿದರೆ ಅವನ ವೈಶಿಷ್ಟ್ಯವನ್ನೆಲ್ಲ ನಾವು ಸ್ಥೂಲವಾಗಿ ಗುರುತಿಸಬಹುದು. ಲಕ್ಷ್ಮೀಶ ಮತ್ತು ಜೈಮಿನಿಗಳನ್ನು ಸ್ವಲ್ಪ ತುಲನಾತ್ಮಕವಾಗಿ ನೋಡಿದರೆ ಲಕ್ಷ್ಮೀಶನ ಪ್ರತಿಭೆಯು ಮಟ್ಟವನ್ನು ಗೊತ್ತುಮಾಡಿಕೊಳ್ಳಬಹುದು.

ವಿಶ್ಲೇಷಣೆಯ ದೃಷ್ಟಿಯಿಂದ ಸೀತಾ ಪರಿತ್ಯಾಗದ ಕಥೆಯನ್ನು ನಾಲ್ಕು ಘಟ್ಟಗಳಾಗಿ ವಿಂಗಡಿಸಿಕೊಳ್ಳಬಹುದು. ಒಂದನೆಯ ಘಟ್ಟ ಗರ್ಭಿಣಿಯಾದ ಸೀತೆ ಕಾಡಿಗೆ ಹೋಗಿ ಋಷ್ಯಾಶ್ರಮಗಳನ್ನೂ, ಋಷಿಪತ್ನಿಯರನ್ನೂ ಕಂಡುಬರುತ್ತೇನೆಂಬ ಬಯಕೆಯನ್ನು ರಾಮನಲ್ಲಿ ಹೇಳಿಕೊಂಡಿದ್ದು; ಅನಂತರ ರಾಮನಿಗೆ ದುಃಸ್ವಪ್ನವಾಗಿ ವಸಿಷ್ಠರಿಂದ ಶಾಂತಿಮಾಡಿಸಿದ್ದು. ದೂತರಿಂದ ಸೀತೆಯ ಬಗ್ಗೆ ರಾಮ ಅಪಶಬ್ದಗಳನ್ನು ಕೇಳಿದ್ದು ಎರಡನೆಯ ಘಟ್ಟ. ಮನಃಕ್ಷೋಭೆಗೊಂಡ ರಾಮ ಲಕ್ಷ್ಮಣನಿಗೆ ಕಾಡಿನಲ್ಲಿ ಸೀತೆಯನ್ನು ಬಿಟ್ಟುಬರಲು ಆಜ್ಞಾಪಿಸಿದ್ದು ಮತ್ತು ಆಗ ಭರತ ಶತ್ರುಘ್ನಾದಿಗಳು ಪ್ರತಿಭಟಿಸಿದುದು ಮೂರನೆಯ ಹಂತ. ನಾಲ್ಕನೆಯ ಘಟ್ಟ ಸೀತೆಯನ್ನು ಲಕ್ಷ್ಮಣ ಕಾಡಿಗೆ ಒಯ್ದು ಬಿಟ್ಟು ಬಂದದ್ದು.

ಮೊದಲ ಭಾಗವನ್ನು ಲಕ್ಷ್ಮೀಶ ಜೈಮಿನಿಗಿಂತ ಚೆನ್ನಾಗಿ ಚಿತ್ರಿಸಿದ್ದಾನೆ. ಜೈಮಿನಿಯಲ್ಲಾದರೆ ಮೊದಲು ರಾಮನಿಗೆ ಸೀತೆ ಪರದೇಶಿಯಾಗಿ ಗಂಗಾತೀರದಲ್ಲಿ ಪ್ರಲಾಪಿಸುತ್ತಿರುವಂತೆ ಕನಸಾಗುತ್ತದೆ. ತಟ್ಟನೆಚ್ಚತ್ತು ಗುರು ವಸಿಷ್ಠರನ್ನು ಕರೆಯಿಸಿ ಶಾಂತಿಮಾಡಿಸುತ್ತಾನೆ. ಸ್ವಲ್ಪದಿನಗಳಾದ ಮೇಲೆ ಗರ್ಭಿಣಿಯಾದ ಸೀತೆ ಕಾಡಿಗೆ ಹೋಗಿ ಋಷಿಪತ್ನಿಯರನ್ನೂ ಋಷ್ಯಾಶ್ರಮುಗಳನ್ನೂ ನೋಡಿ ಬರಬೇಕೆಂಬ ತನ್ನ ಬಯಕೆಯನ್ನು ತಿಳಿಸುತ್ತಾಳೆ. ರಾಮನಿಗೆ. ರಾಮ ಅದಕ್ಕೆ ಒಪ್ಪಿಗೆ ಕೊಟ್ಟು ಹಿಂದಿರುಗುತ್ತಾನೆ. ಅಷ್ಟರಲ್ಲಿ ಗೂಢಚಾರರು ಬಂದು. ಅಗಸನೊಬ್ಬ ಮನೆಯನ್ನು ಬಿಟ್ಟು

ತಂದೆಯ ಮನೆಗೆ ಹೋಗಿ ತಂದೆಯ ಹಿತೋಪದೇಶದಿಂದ ಮತ್ತೆ ಮನೆಗೆ ಹಿಂದಿರುಗಿದ ಪತ್ನಿಯನ್ನು ಕುರಿತು ನಿನ್ನನ್ನು ಮನೆಯೊಳಕ್ಕೆ ಸೇರಿಸಿಕೊಳ್ಳುವುದಕ್ಕೆ ನಾನೇನೂ ರಾಮನಲ್ಲ ಎಂದು ಹೇಳಿದ್ದನ್ನು ತಿಳಿಸುತ್ತಾರೆ. ನೊಂದ ರಾಮ ಸೀತೆಯನ್ನು ಬಿಡುವ ತೀರ್ಮಾನ ಮಾಡಿಕೊಳ್ಳುತ್ತಾನೆ. ಮನಸ್ಸಿನ ತಳಮಳವನ್ನು ತಾಳಲಾರದೆ ರಾಮ ತಾನೊಬ್ಬನೇ ಉಳಿಯುತ್ತಾನೆ. ಬೆಳಗಾಗುವುದಕ್ಕೆ ಮೊದಲೇ ತನ್ನ ಸೇವೆಮಾಡಲು ಬಂದ ಸೋದರರಿಗೆ ಈತನ ಖಿನ್ನಮುಖವನ್ನು ಕಂಡು ಗಾಬರಿಯಾಗುತ್ತದೆ. ರಾಮ ಆಗ ಹಿಂದಿನ ದಿನ ಸೀತೆ ಕಾಡಿಗೆ ಹೋಗಬೇಕೆಂಬ ಬಯಕೆಯನ್ನು ಪೂರ್ಣಮಾಡುವುದಾಗಿ ಹೇಳಿದ್ದ ಮಾತಿನ ನೆನಪಾಗಿ ಸೀತೆಯನ್ನು ಕಾಡಿನಲ್ಲಿ ಬಿಟ್ಟುಬರಲು ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ. ಭರತ. ಶತ್ರುಘ್ನ ಮತ್ತು ಲಕ್ಷ್ಮಣರ ಪ್ರತಿಭಟನೆಗಳು. ತರ್ಕ, ಸೀತೆಯನ್ನು ಕುರಿತ ಮಾತುಗಳಾವುವೂ ರಾಮನ ನಿರ್ಧಾರವನ್ನು ಬದಲಿಸಲಾಗಲಿಲ್ಲ. ರಾಮ ವಿಸ್ತಾರವಾಗಿ ಹಿಂದಿನ ದೊರೆಗಳು ಯಶಸ್ಸಿಗಾಗಿ ಏನೇನನ್ನು ತ್ಯಾಗಮಾಡಬೇಕಾಗಿ ಬಂದಿತೆಂಬುದನ್ನೂ ವಿವರಿಸಿ ಕೊನೆಗೆ ಲಕ್ಷ್ಮಣನನ್ನು ಕುರಿತು. 'ಲಕ್ಷ್ಮಣ. ಸೀತೆಯನ್ನು ಕಾಡಿನಲ್ಲಿ ಬಿಟ್ಟುಬರುವ ಪಾಪದ ಹೊಣೆ ನನ್ನ ಮೇಲಿರಲಿ; ನಿನ್ನ ಕಾಲಿಗೆ ಬೀಳುತ್ತೇನೆ. ಹೋಗು, ಸೀತೆಯನ್ನು ಕಾಡಿನಲ್ಲಿ ಬಿಟ್ಟುಬಾ' ಎಂದು ಆಜ್ಞಾಪಿಸುತ್ತಾನೆ. ಬೆಳಗಾಗುತ್ತಿದ್ದಂತೆ ಲಕ್ಷ್ಮಣ ರಥವನ್ನು ತಂದು ಹೊರಗಿರಿಸಿ ಸೀತಾದೇವಿಗೆ ರಥವು ಸಿದ್ಧವಾಗಿದೆಯೆಂದು ಹೇಳಿದನು. ಸೀತೆ ಸಂಭ್ರಮಗೊಂಡು ಕೌಸಲ್ಯೆ ಸುಮಿತ್ರಾದಿಗಳನ್ನು ಕಂಡು ನಮಸ್ಕರಿಸಿ ಬಂದಳು. ಅವರೆಲ್ಲ ಕಾಡಿಗೆ ಹೋಗುವ ಬಯಕೆ ನಿನ್ನಲ್ಲಿ ಏಕೆ ಹುಟ್ಟಿತು? ಕಾಡಿನಲ್ಲಿ ನೀನು ಹಿಂದೆ ಅನುಭವಿಸಿದ್ದು ಸಾಲದೆ? ಎಂದು ಕೇಳಿದರು. ಕೊನೆಗೆ ಅವರಿಂದ ಆಶೀರ್ವಾದ ಪಡೆದು

ರಥವನ್ನೇರಿ ಬಂದು ಕುಳಿತಳು. ರಥ ಹೊರಟಿತು. ದಾರಿಯಲ್ಲಿ ಅಡಿಗಡಿಗೆ ಅಪಶಕುನಗಳಾದುವು. ಯಾವ ಋಷ್ಯಾಶ್ರಮಗಳನ್ನೂ ಕಾಣದೆ ಸೀತೆ ಲಕ್ಷ್ಮಣನನ್ನು 'ದಾರಿ ತಪ್ಪಿದ್ದೇವೆಯೆ ಲಕ್ಷ್ಮಣ?' ಎಂದು ಕೇಳಿದಳು, ಆಗ ಲಕ್ಷ್ಮಣ ಮನಸ್ಸನ್ನು ಗಟ್ಟಿಮಾಡಿ ರಾಮನ ಕಠೋರವಾದ ಆಜ್ಞೆಯನ್ನು ಸೀತೆಗೆ ತಿಳಿಸಿದನು. ಸೀತೆ ಬಹಳವಾಗಿ ಪ್ರಲಾಪಿಸಿದಳು. ಕೌಸಲ್ಯಾದಿಗಳಿದ್ದು, ಲಕ್ಷ್ಮಣಾದಿಗಳು ಇದ್ದು ರಾಮ ಹೀಗೆ ನಿರಪರಾಧಿಯಾದ ನನ್ನನ್ನು ಬಿಡಲು ಹೇಗೆ ಸಮ್ಮತಿಸಿದರು ಎಂದು ವ್ಯಥೆಪಟ್ಟು, ಮೂರ್ಛೆಹೋದಳು. ಮೂರ್ಛೆ ತಿಳಿದಮೇಲೆ ಲಕ್ಷ್ಮಣ ಬಹಳ ಕಷ್ಟಪಟ್ಟು ಹಿಂದಿರುಗಿದನು. ರೋದಿಸುತ್ತಾ ಪ್ರಲಾಪಮಾಡುತ್ತಾ ಇದ್ದ ಸೀತೆಯನ್ನು ವಾಲ್ಮೀಕಿ ಕಂಡು ಸಂತೈಸಿ ಉಪಚರಿಸಿ ಆಶ್ರಮಕ್ಕೆ ಕರೆದೊಯ್ದನು. ಇಷ್ಟು ಸಂಕ್ಷೇಪವಾಗಿ ಸೀತಾಪರಿತ್ಯಾಗದ ಕಥೆ.

ಸೀತೆ ಕಾಡಿಗೆ ಹೋಗಬೇಕಾಗಿ ಬಂದ ಸಂದರ್ಭವನ್ನು ಜೈಮಿನಿಗಿಂತ ಲಕ್ಷ್ಮೀಶ ಚೆನ್ನಾಗಿ ತಂದಿದ್ದಾನೆ. ಈ ಎರಡು ಪದ್ಯಗಳನ್ನು ನೋಡೋಣ:

ಉತ್ಸವಕೆ ಬಂದನಿಬರೆಲ್ಲರಂ ಶರಣಜನ
ವತ್ಸಲಂ ಸತ್ಕರಿಸಿ ಬೀಳ್ಕೊಟ್ಟು ರಾಜ ಸಂ
ಪತ್ಸುಖದೊಳಿರ್ಪನಿತರೊಳ್ ಬಳಿಕ ಸೀತೆ ನಿಜಕಾಂತನೇಕಾಂತಕೈದಿ ॥
ಕುತ್ಸಿತಂ ಪೊರ್ದದಾಶ್ರಮದ ಋಷಿಪತ್ನಿಯರ
ಸತ್ಸಂಗದೊಳ್ ತನ್ನ ಬೇಸರಂ ತವಿಸುವೆನಿ
ದುತ್ಸುಕಂ ತನಗದರಿನಿನ್ನೊಮ್ಮೆ ಬನಕೆ ತನ್ನಂ ಕಳುಹಬೇಕೆಂದಳು ॥

ಆ ಕ್ಷಿತಿಜೆ ಬಯಕೆಯಂ ಬಿನ್ನೈಸೆ ಕೇಳ್ದು ನಗು
ತಾಕ್ಷೇಪದಿಂದೆ ಕಳುಹುವನಾಗಿ ಸಂತೈಸಿ
ರಾಕ್ಷಸಾಂತಕನಿರಲ್ಕೊಂದಿರುಳ್ ಕನಸುಗಂಡೇಳುತೆ ವಸಿಷ್ಠನೊಡನೆ ॥
ಈ ಕ್ಷೋಣಿಸುತೆ ಗಂಗೆಯುಂ ಕಳೆದು ಕಾಡೊಳ್ ಮ
ಹಾ ಕ್ಷೀಣೆಯಾಗಿ ದೇಸಿಗರಂತೆ ದೆಸೆದೆಸೆಯ
ನೀಕ್ಷಿಸುತೆ ಮರುಗುತಿರ್ದುದಂ ಕಂಡೆನಿದು ಲೇಸಹುದೆ ಪೇಳೆಂದನು.

ಪುಂಸವನ ಸೀಮಂತದ ಉತ್ಸವ ಮುಗಿದಮೇಲೆ, ಬಂದಿದ್ದ ಗುರುಹಿರಿಯರು ಬಂಧುಗಳನ್ನು ಸತ್ಕರಿಸಿ ಬೀಳ್ಕೊಟ್ಟು ಸೀತೆ ರಾಮನೊಡನೆ ಏಕಾಂತದಲ್ಲಿದ್ದಾಗ ಋಷ್ಯಾಶ್ರಮದಲ್ಲಿರುವ ಶುದ್ಧ ಸ್ವಭಾವದ ಋಷಿಪತ್ನಿಯರ ಜೊತೆಯಿದ್ದು ಬರುವ ಬಯಕೆ ಯಾಗಿದೆ ಎನ್ನುತ್ತಾಳೆ. 'ಇನ್ನೊಮ್ಮೆ ಬನಕೆ ತನ್ನಂ ಕಳುಹ ಬೇಕು' ಎನ್ನುವ ಸೀತೆಯ ಮಾತುಗಳನ್ನು ಗಮನಿಸಿ. ಲಕ್ಷ್ಮೀಶನ ಈ ಬಯಕೆಯ ಕಲ್ಪನೆಯಲ್ಲಿ ಭವಿಷ್ಯತ್ತಿನ ಸೂಚನೆಯಿದೆ. ಅಷ್ಟೇ ಅಲ್ಲ, ಪುಂಸವನ ಸೀಮಂತ ಮುಗಿದು ಜನರ ಗದ್ದಲದಿಂದ ತುಂಬಿದ್ದ ಅರಮನೆ ಈಗ ಪ್ರಶಾಂತವಾಗಿದೆ. ಅದೇ ಸಂದರ್ಭದಲ್ಲಿ ಸೀತೆಗೆ ಈ ಬಯಕೆಯೂ ಆಗಿದೆ. ಅದನ್ನವಳು ಏಕಾಂತದಲ್ಲಿ ಗಂಡನಿಗೆ ತಿಳಿಸುತ್ತಿದ್ದಾಳೆ ಎನ್ನುವಲ್ಲಿ ಸಹಜತೆಯೂ ಇದೆ. ಈ ಬಯಕೆಯನ್ನು ಕೇಳಿದ ರಾಮನ ಪ್ರತಿಕ್ರಿಯೆಯೂ ಚೆನ್ನಾಗಿ ಚಿತ್ರಿತವಾಗಿದೆ. ಈ ಬಯಕೆಯನ್ನು ಕೇಳುತ್ತಲೇ 'ನಗುತಾಕ್ಷೇಪ ದಿಂದೆ ಕಳುಹುವನಾಗಿ ಸಂತೈಸಿ' ಎನ್ನುವ ಮಾತುಗಳಲ್ಲಿ ವಿಶೇಷ ಅರ್ಥಶಕ್ತಿಯಿದೆ. 'ನಗುತ' ಎಂಬ ಮಾತಿನಲ್ಲಿ ಹದಿನಾಲ್ಕು ವರ್ಷ ಗಳು ಕಾಡಿನಲ್ಲಿದ್ದು ಇನ್ನೂ ಕಾಡಿನಾಸೆ ಹೋಗಿಲ್ಲವೇ ಎಂದು ಮಡದಿಯನ್ನು ಹಾಸ್ಯಮಾಡುವ ಧ್ವನಿಯೂ ಇದೆ: 'ಆಕ್ಷೇಪದಿಂದೆ' ಎಂಬ ಮಾತಿನಲ್ಲಿ ಕಾಡಿನ ಶಬ್ದವನ್ನು ಕೇಳಿದಾಗ ಮನಸ್ಸಿನಲ್ಲಿ ಮೂಡಿದ ವನವಾಸಾನುಭವಗಳ ಭಯ ಸೂಚಿತವಾಗಿದೆ. 'ಆಕ್ಷೇಪ ದಿಂದೆ ಕಳುಹುವನಾಗಿ ಸಂತೈಸಿ' ಮಾತುಗಳಲ್ಲಿ 'ಸಂತೈಸಿ' ಸೀತೆ ಯನ್ನು ಸಮಾಧಾನಗೊಳಿಸಿದ್ದನ್ನು ಸೂಚಿಸಿದ್ದರೂ ಮೂರು ಪದ ಗಳನ್ನೂ ಒಟ್ಟಾಗಿ ಗಮನಿಸಿದಾಗ ಸೀತೆಯನ್ನು ಆಕ್ಷೇಪಣೆ ಮಾಡಿಯೇ ಕಳುಹಿಸುವ ಸೂಚನೆಯೂ ಇದೆ. ಇಷ್ಟು ನಡೆದ ಮೇಲೆ ಒಂದು ರಾತ್ರಿ ರಾಮನಿಗೆ ಸೀತಾದೇವಿ ಗಂಗಾತೀರದಲ್ಲಿ ಪರದೇಶಿಯಾಗಿ ರೋದಿಸಿ ಅಲೆಯುತ್ತಿರುವ ಕನಸಾಗುತ್ತದೆ.

'ಕನಸುಗಂಡೇಳುತೆ' ಮಾತುಗಳಲ್ಲಿ ಕನಸಿನಿಂದ ತಟ್ಟನೆ ಎದ್ದು ಕುಳಿತ ಅನುಭವ ರಾಮನ ಮನಸ್ಸಿನ ಗಾಬರಿಯನ್ನು ಚಿತ್ರಿಸುತ್ತದೆ. ತಟ್ಟನೆ ರಾಮ ವಸಿಷ್ಠರನ್ನು ಕರೆಸಿ ಶಾಂತಿಯನ್ನೇನೋ ಮಾಡಿಸಿದ. ಆದರೆ ಮೂರುನಾಲ್ಕು ದಿನಗಳವರೆಗೆ ಇದೇ ಯೋಚನೆಯಲ್ಲಿ ಭೀತಿಯಲ್ಲಿಯೇ ಇದ್ದು ಇದ್ದಕ್ಕಿದ್ದಂತೆ ಕೆಲದಿನ ಕಳೆದು ರಾಮನಿಗೆ ಕರ್ತವ್ಯ ಪ್ರಜ್ಞೆಹುಟ್ಟಿ ಜಾಗರೂಕನಾದನು. ಈ ಭಾಗದಲ್ಲಿ ಲಕ್ಷ್ಮೀಶನ ಕಥೆ ಹೆಚ್ಚು ಸಹಜವಾಗಿದೆ. ಸಂಗ್ರಹವಾಗಿದೆ. ಲಕ್ಷ್ಮೀಶ ಹೇಳುವ ಕಥೆ ರಾಮನ ಮನಸ್ಸಿನ ತಾಕಲಾಟವನ್ನು ಚಿತ್ರಿಸುವಲ್ಲಿ ಮತ್ತು ಸೀತೆಯನ್ನು ಮತ್ತೆ ಕಾಡಿಗೆ ಕಳುಹಿಸಲು ಸಂದರ್ಭವನ್ನು ಸಜ್ಜುಗೊಳಿಸುವಲ್ಲಿ ಅತ್ಯಂತ ಯಶಸ್ವಿಯಾಗಿದೆ. ಜೈಮಿನಿಯಲ್ಲಾದರೆ ಪುಂಸವನ ಸೀಮಂತದ ವರ್ಣನೆಯೇ ಬೇಸರವಾಗುವಷ್ಟು ವಿಸ್ತಾರವಾಗಿ ಬಿಡುತ್ತದೆ. ಆ ಮೇಲೆ ರಾಮನಿಗೆ ಮೊದಲು ಕನಸು ಬೀಳುತ್ತದೆ. ವಸಿಷ್ಠರಿಂದ ರಾಮ ಅದಕ್ಕೆ ಶಾಂತಿ ಮಾಡಿಸುತ್ತಾನೆ. ಅನಂತರ ಸೀತಾದೇವಿ ಕಾಡಿಗೆ ಹೋಗಿ ಆಶ್ರಮದ ಋಷಿಪತ್ನಿಯರನ್ನು ಕಂಡುಬರುವ ಬಯಕೆಯನ್ನು ಹೇಳಿಕೊಳ್ಳುತ್ತಾಳೆ.

ಈ ಸಂದರ್ಭದಲ್ಲಿ ಘಟನೆಗಳನ್ನು ಹಿಂದುಮುಂದು ಮಾಡಿದುದಷ್ಟೇ ಲಕ್ಷ್ಮೀಶನ ಕೌಶಲವಲ್ಲ. ಔಚಿತ್ಯಪೂರ್ಣವಾಗಿ ಘಟನೆಗಳನ್ನು ಬೆಳೆಸಿರುವುದು ಈತನ ವೈಶಿಷ್ಟ್ಯ. ಉದ್ದಕ್ಕೂ ಸೀತಾಪರಿತ್ಯಾಗಕ್ಕೆ ರಾಮನ ಮನಸ್ಸನ್ನು ಸಿದ್ಧಗೊಳಿಸುತ್ತಿದ್ದಾನೆ ಈತ. ಸೀತೆ ಬಯಕೆಯನ್ನು ತಿಳಿಸಿದಾಗಲೇ ಮೊದಲು ನಕ್ಕ, ಅಲ್ಲಿಗೇ ಅವಳು ಬಯಕೆಯನ್ನು ಬಿಡಲಿ ಎಂದು. ಅನಂತರ ಆಕ್ಷೇಪಿಸಿದ, ಕೊನೆಗೆ ನಿರ್ವಾಹವಿಲ್ಲದೆ ಒಪ್ಪಿಕೊಂಡ. ತನ್ನ ಮಡದಿ ಕಾಡಿಗೆ ಹೋಗಬೇಕೆಂದು ಬಯಸಿದ ಸ್ವಲ್ಪದಿನಗಳಲ್ಲೇ ಸೀತೆ ಪರದೇಶಿಯಾಗಿ ಗಂಗಾತೀರದಲ್ಲಿ ಅಲೆಯುತ್ತಿರುವ ಕನಸು ರಾಮನ ಮನ

ಸ್ಸಿನಲ್ಲಿ ಸೀತೆಯು ಬಗೆಗಿರುವ ತೀವ್ರಭಾವನೆಗಳಿಗೆ ಗುರುತಾಗಿ ಅರ್ಥವನ್ನು ಹೆಚ್ಚಿಸುತ್ತದೆ. ಕನಸುಗಂಡೆದ್ದು ವಸಿಷ್ಠರಿಂದ ಶಾಂತಿ ಮಾಡಿಸಿದ ಮೇಲೂ ಮೂರುನಾಲ್ಕು ದಿನಗಳವರೆಗೆ ಕಿಂಕರ್ತವ್ಯ ಮೂಢನಾಗಿದ್ದ ವಿವರ ಆತನ ಪರವಶತೆಯನ್ನೂ ಸೀತೆಯನ್ನು ಕುರಿತ ಸಂಬಂಧಾಧಿಕ್ಯವನ್ನೂ ಸೂಚಿಸುತ್ತದೆ. ಸೀತೆ ಕಾಡುಪಾಲಾಗುವ ಮೊದಲೇ ಅವಳು ಕಾಡಿಗೆ ಹೋದಾಗಿನ ನೋವುಗಳಿಗೆ ರಾಮನನ್ನು ಸಿದ್ಧಗೊಳಿಸುವ ಅನುಭವಗಳ ಚಿತ್ರ ಇವು. ರಾಮನ ಮನಸ್ಸಿನ ಸೂಕ್ಷ್ಮತೆಯನ್ನು ಮತ್ತು ಸೀತೆಯನ್ನು ಕುರಿತು ರಾಮನಿಗಿರುವ ಒಲವಿನ ಆಳವನ್ನು ಎಳೆಯೆಳೆಯಾಗಿ ಚಿತ್ರಿಸುತ್ತದೆ ಲಕ್ಷ್ಮೀಶನ ಬರೆವಣಿಗೆ. ಸೀತೆಯ ಪಾತ್ರದ ದೃಷ್ಟಿಯಿಂದಲೂ ಈ ಘಟನೆ ಚೆಲುವಾಗಿದೆ. ಸೀಮಂತವಾದ ಮೇಲೆ ಋಷ್ಯಾಶ್ರಮಗಳಿಗೆ ಹೋಗಿ ಬರಬೇಕೆಂದು ಬಯಸಿದ ಬಯಕೆ ಅವಳ ಮನಸ್ಸಿನ ಒಲವನ್ನು ಚಿತ್ರಿಸುತ್ತದೆ. ಸಾಮಾನ್ಯ ಸ್ತ್ರೀಯಂತೆ ಐಶ್ವರ್ಯಾದಿಗಳನ್ನು ಬಯಸದ ಸೀತೆ 'ಕುತ್ಸಿತಂ ಪೊರ್ದದಾಶ್ರಮದ ಋಷಿಪತ್ನಿಯರ ಸತ್ಸಂಗ' ದಲ್ಲಿ ಇರಲು ಆಶಿಸುವುದು ಅವಳ ಮನಸ್ಸಿನ ಔನ್ನತ್ಯ. ಇಂಥ ಔನ್ನತ್ಯವಿದ್ದುದರಿಂದಲೇಆಕೆ 'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಎನ್ನುವ ಹೃದಯಪಾಕವನ್ನು ತೋರಿಸುವುದು.

ಮೂರುನಾಲ್ಕು ದಿನಗಳ ದಿಙ್ಮೂಢತೆಯಿಂದ ರಾಮ ಇದ್ದಕ್ಕಿದ್ದಂತೆ ಜಾಗೃತನಾಗಿ ದೂತರನ್ನು ಕರೆಸಿ ತನ್ನ ಈ ಸ್ವಲ್ಪದಿನಗಳ ಕರ್ತವ್ಯ ಪರಾಙ್ಮುಖತೆಯ ಬಗೆಗೆ ಜನರೇನಾದರೂ ಮಾತನಾಡಿದರೇ ಎಂದು ಪ್ರಶ್ನಿಸುವಲ್ಲಿ ರಾಮನ ಆತ್ಮವಿಮರ್ಶೆ ಮತ್ತು ಪ್ರಜೆಗಳ ಯೋಗಕ್ಷೇಮದ ಬಗ್ಗೆ ಅವನಿಗಿರುವ ಕಾಳಜಿಗಳನ್ನು ಲಕ್ಷ್ಮೀಶ ಮೆರೆಯುತ್ತಾನೆ.

ನಿಂದಿಸರಲೇ ಪ್ರಜೆಗಳಿನ್ನೆಗಂ ತನ್ನ ಗುಣ
ಕೊಂದಿಸರಲೇ ಪಳಿವನಮಲತರ ಕೀರ್ತಿಯಂ
ಕಂದಿಸರಲೇ ದೂಸರಿಂದೆ ಭುಜವಿಜಯ ಪ್ರತಾಪ ತೇಜವನಿಳೆಯೊಳು॥
ಸಂದಿಸರಲೇ ಜರೆದು ನಿಜವಂಶದೇಳ್ಗೆಯಂ
ಕುಂದಿಸರಲೇ ಖೋಡಿಗಳೆದು ವಹಮಾನದೊಳ್
ಸಂಧಿಸರಲೇ ಕೊಂಕುಕೊರತೆಗಳನೆಂದವನನಸುರಾರಿ ಬೆಸಗೊಂಡನು ॥

ಜೈಮಿನಿಯಲ್ಲಿದ್ದಂತೆ ಸುತ್ತು ಬಳಸು ವಿಸ್ತಾರ ಇಲ್ಲಿಲ್ಲ. ಲಕ್ಷ್ಮೀಶ ನೇರವಾಗಿ ತನ್ನ ದೂತರನ್ನು ಪ್ರಶ್ನಿಸುತ್ತಾನೆ. ಹೀಗೆ ಪ್ರಶ್ನಿಸುವುದಕ್ಕೆ ಆತನಿಗೆ ಕಾರಣವಿದೆ. ತನ್ನ ಮಡದಿಯ ಬಗ್ಗೆ ಕನಸಿನಗೊಂದಲದ ಪರಿಣಾಮವಾಗಿ ಕರ್ತವ್ಯಗಳನ್ನೇ ಮರೆತಿದ್ದ ರಾಮನಿಗೆ ಇಂಥ ಒಂದು ಭಾವನೆ ಬರುವುದು ಅಸಹಜವಲ್ಲ. ಕರ್ತವ್ಯ ಪರಾಙ್ಮುಖನಾಗಿದ್ದುದು ತನಗೇ ಗೊತ್ತಿದ್ದಾಗ ಪ್ರಜಾವತ್ಸಲನಾದ ದೊರೆಯ ಮನಸ್ಸಿನಲ್ಲಿ ಬರುವ ಸಹಜಭಾವನೆ ಇದು. ಆದರೆ ದುರ್ದೈವದಿಂದ ಅವನು ಕೇಳಬೇಕಾದ ಸುದ್ದಿ ತನ್ನ ಕರ್ತವ್ಯ ವಿಮುಖತೆಯನ್ನು ಕುರಿತದ್ದಲ್ಲ; ಯಾರ ಬಯಕೆಯ ಮಾತನ್ನು ಕೇಳಿ ಕೆಟ್ಟಕನಸೂ ಬಿದ್ದು ಮೂರುನಾಲ್ಕು ದಿನ ನರಳಿದ್ದನೊ ಅವಳ ಬಗ್ಗೆ ಕೇಳಬೇಕಾಯಿತು. ಈ ವಿಧಿಯ ವಿಪರ್ಯಾಸವನ್ನು ಕವಿ ಬಹಳ ಶಕ್ತಿಯುತವಾಗಿ ಚಿತ್ರಿಸುತ್ತಿದ್ದಾನೆ. ದೂತರು ಸುತ್ತಿ ಬಳಸಿ ಆಡುವ ಮಾತುಗಳಿಂದ ರಾಮನಿಗೆ ಸುಳಿವು ದೊರೆಯುತ್ತದೆ, ಅಪ್ರಿಯವಾದುದಾವುದೋ ಇರಬೇಕೆಂದು. ಕೆಳಗಿನ ಮೂರು ಪದ್ಯಗಳಲ್ಲಿ ಅತ್ಯಂತ ಸಂಗ್ರಹವಾಗಿ ಶಕ್ತಿಯುತವಾಗಿ ಲಕ್ಷ್ಮೀಶ ಹೇಳುವ ಕಥೆ ಮೂಲದಲ್ಲಿ ಬಹಳ ವಿಸ್ತಾರವಾಗಿದೆ. ಅಲ್ಲಿಯ ದೂತರು ರಾಮನೊಡನೆ ಹೇಳುವ ಮಾತುಗಳಲ್ಲಿ ಕೂಡ ಸಂಯಮ ಕಡಿಮೆ.

ಪಳಂಜಬೇಡಿನ್ನು ಮಾಜದಿರ್ ತನ್ನಾಣೆ
ಹೇಳೆಂದು ರಘುಕುಲಲಲಾಮನೊತ್ತಾಯದಿಂ

ಕೇಳಲವನೆಂದನವಧರಿಸೊರ್ವ ಮಡಿವಾಳಿ ಮಲಿನಮಂ ತೊಳೆವನಾಗಿ ||
ಕಾಳುಗಡೆದಂ ಜೀಯ ಸದ್ಗುಣ ಚರಿತ್ರನಾ
ಮಾಳಿಯಿಂ ಜಗಮಂ ಪುನೀತಮಂ ಮಾಳ್ಪ ನಿ
ನ್ನೇಳಿಗೆಯನವನೆತ್ತ ಬಲ್ಲನೆನಲೇನೆಂದನೆನಲಾತನಿಂತೆಂದನು ||

ಪೆಂಡತಿ ತವರ್ಮನೆಗೆ ಮುಳಿದು ಪೇಳದೆ ಪೋದ
ಚಂಡಿತನಕವಳ ತಾಯ್ತಂದೆಗಳ್ ಕಳುಹ ಬಂ
ದಂಡಲೆದೊಡಿನ್ನೊಲ್ಲೆನಗಲಿರ್ದ ಮಡದಿಯಂ ಮತ್ತೆ ರಘುನಾಥನಂತೆ||
ಕೊಂಡಾಳುವವನಲ್ಲ ತಾನೆಂದು ರಜಕನು
ದ್ದಂಡದೊಳ್ ನುಡಿಯೆ ಕಿವಿಮುಚ್ಚಿಕೊಳುತೆಯ್ದಿದೆನ
ಖಂಡಿತದ ಮಂತ್ರಪೂತದ ಹವಿಯನರಿದೆಂಜಲಿಪುದೆ ವಾಯಸವೆಂದನು||

ಎಂದು ಬಿನ್ನೈಸೆ ಕೇಳ್ದಾತನಂ ಕಳುಹಿ ರಘು
ನಂದನಂ ಬಂಧನಕ್ಕೊಳಗಾದ ಮತ್ತಗಜ
ದಂದದಿಂ ನಿಜಶಿರವನೊಲೆದು ಮೂಗಿನಮೇಲೆ ಬೆರಳಿಟ್ಟು
ಮೌನದಿಂದೆ ||
ನಿಂದು ಸ್ವೈರಗಾಗಿ ನೆನೆನೆನೆದು ಚಿತ್ತದೊಳ್
ನೊಂದು ಬಿಸುಸುಯ್ದು ಕಡುವಳಿದು ಕಾತರಿಸಿ ಕಳೆ
ಗುಂದಿ ದುಮ್ಮಾನದಿಂ ಪೊಕ್ಕನಂತಃಪುರಕೆ ಪುತ್ತವುಗುವಹಿಪನಂತೆ ||

ಮೊದಲು ರಾಮ ಅಂಜಬೇಡ ಹೇಳು ಎಂದು ಅಭಯ ನೀಡುತ್ತಾನೆ. ಅನಂತರ ಸತ್ಯವನ್ನು ಬಚ್ಚಿಡಬಾರದೆಂದು ತನ್ನ ಆಣೆ ಯಿಡುತ್ತಾನೆ. ಮತ್ತೆ ರಘುಕುಲಲಲಾಮ ಒತ್ತಾಯದಿಂದ ಕೇಳು ತ್ತಾನೆ. ಅಭಯ. ಆಜ್ಞೆ. ಒತ್ತಾಯ ಇವು ಮೂರು ಸತ್ಯವನ್ನು ತಿಳಿವ ಬಗೆಗಿರುವ ರಾಮನ ಆತುರವನ್ನು ಸೂಚಿಸುತ್ತವೆ. ಅನಂತರ ದೂತ ಹೇಳುವ ಮಾತು ನೇರವಾಗಿದೆ. ಎಷ್ಟು ಕಡಿಮೆ ಮಾತು ಗಳಲ್ಲಿ ಸಾಧ್ಯವೋ ಅಷ್ಟು ಕಡಿಮೆ ಮಾತುಗಳಲ್ಲಿ ಈ ಅಪ್ರಿಯ ಸಮಾಚಾರವನ್ನು ತಿಳಿಸಿ ಕಿವಿಮುಚ್ಚಿಕೊಂಡು ಬಂದಿದ್ದಾನೆ ದೂತ. ಮೂಲದಲ್ಲಿ ಹೀಗಾಗಿಲ್ಲ. ದೂತರನ್ನು ಕುರಿತು ರಾಮ ಸುದ್ದಿ ಯೇನೆಂದು ಕೇಳುವ ಸಂದರ್ಭ ಲಕ್ಷ್ಮೀಶನಲ್ಲಿರುವಷ್ಟು ಸ್ವಾರಸ್ಯ

ಕರವಾಗಿಲ್ಲ. ಅಲ್ಲಿ ರಾಮ ಎಂದಿನಂತೆ ಅಂದೂ ರಾತ್ರಿ ದೂತರನ್ನು ಸಮಾಚಾರವೇನೆಂದು ಕೇಳುತ್ತಾನೆ. ಎರಡನೆಯದಾಗಿ ರಾಮನ ಪ್ರಶ್ನೆ ಅಲ್ಲಿ ಅನುಚಿತವಾಗಿದೆ. ರಾಮ ದೂತರನ್ನು ಕುರಿತು ನನ್ನನ್ನಾಗಲಿ, ನನ್ನ ಹೆಂಡತಿಯನ್ನಾಗಲಿ ಅಥವಾ ಸೋದರರ ನ್ನಾಗಲಿ ಕುರಿತು ಜನ ಏನೆನ್ನುತ್ತಾರೆ ಎನ್ನುತ್ತಾನೆ. ತನ್ನನ್ನು ಕುರಿತು ಕೇಳಿಕೊಳ್ಳಲಿ. ಹೆಂಡತಿಯನ್ನು ಮತ್ತು ಸೋದರರನ್ನು ಕುರಿತು ತಾನೇ ಹಾಗೆ ಕೇಳಿದ ರೀತಿ ಅಷ್ಟು ರಾಮನ ಘನತೆಗೆ ತಕ್ಕುದಲ್ಲ. ಲಕ್ಷ್ಮೀಶ ಈ ವಿಷಯದಲ್ಲಿ ಔಚಿತ್ಯವರಿತವನು. ಮೂರುನಾಲ್ಕು ದಿನಗಳ ತನ್ಮಯತೆಯ ಅನಂತರ ಎಚ್ಚತ್ತು ತನ್ನ ಮತ್ತು ತನ್ನವಂಶದ ಕೀರ್ತಿಯ ಬಗ್ಗೆ ಕೆಟ್ಟಮಾತೇನೂ ಇಲ್ಲತಾನೇ ಎಂದು ಪ್ರಶ್ನಿಸುವಂತೆ ಘಟನೆಯನ್ನು ರೂಪಿಸಿ ಯಶ ಸ್ವಿಯಾಗಿದ್ದಾನೆ. ಮುಂದೆ ದೂತನಾಡುವ ಮಾತೂ ಅಷ್ಟೆ. ಲಕ್ಷ್ಮೀಶನ ದೂತನಲ್ಲಿರುವಷ್ಟು ನಯ, ಭಕ್ತಿ, ಗೌರವ ಹಾಗೂ ಸಂಯಮಗಳು ಅಲ್ಲಿಲ್ಲ. ಅಗಸನು ಹೇಳಿದ್ದನ್ನೆ ಹೇಳುವಾಗಲೂ ಲಕ್ಷ್ಮೀಶನ ದೂತ ಎಚ್ಚತ್ತವನು; ಮಿತಭಾಷಿ; ಅಪ್ರಿಯವನ್ನು ಆತ ಬಯಸದವನು. ಆದರೆ ಸತ್ಯಭಾಷಿ; ಕರ್ತವ್ಯಮುಖನಾದವನು. ಜೈಮಿನಿಯ ದೂತ ಆಡುವ ಮಾತುಗಳಿವು: 'ರಾಮ ಬೇಕಾದರೆ ಹೆಂಡತಿಯನ್ನು ಸೇರಿಸಿಕೊಳ್ಳಲಿ; ನಾನು ಹಾಗೆ ಮಾಡುವುದಿಲ್ಲ'; 'ರಾಕ್ಷಸರ ಮನೆಯಲ್ಲಿದ್ದ ಹೆಂಡತಿ ಸೀತೆಯನ್ನು ಕರೆದುಕೊಂಡು ಬಂದು ಮನೆಯಲ್ಲಿಟ್ಟುಕೊಂಡ ರಾಮನ ಹಾಗೆ ನಡೆದುಕೊಳ್ಳುವವನು ಎಂದು ನನ್ನ ಬಗ್ಗೆ ತಿಳಿದಿದ್ದೀರೇನು,' ಎಷ್ಟೇ ಸತ್ಯದ ಹಾಗೂ ಕರ್ತವ್ಯದ ವಿಷಯವಾದರೂ ರಾಮನಂಥ ಸತ್ಯವಂತನ ಮುಂದೆ ಸೀತಾ ಮಾತೆಯಂಥವಳ ಶೀಲವನ್ನು ಕುರಿತು ಮಾತಾಡುವಾಗ ಅತ್ಯಂತ ನಿಷ್ಠರಾದ ಸೇವಕರು ಹೀಗೆ ವರ್ತಿಸುವುದು ಸಾಧ್ಯವೇನು? ಅಲ್ಲದೆ ಜೈಮಿನಿಯ ದೂತ ಉದ್ಧರಿಸುವ 'ರಾಮ ಬೇಕಾದರೆ

ಹೆಂಡತಿಯನ್ನು ಪುನಃ ಮನೆಗೆ ಸೇರಿಸಿಕೊಳ್ಳಲಿ ನಾನು ಹಾಗೆ ಮಾಡುವುದಿಲ್ಲ' ಎಂಬ ಅಗಸನ ಮಾತಿನಲ್ಲಿ ಅಗಸನ ಮಟ್ಟ ಹಾಗೂ ಸಂಸ್ಕಾರಗಳು ಕಾಣುತ್ತವೆ ಎನ್ನಬಹುದಾದರೂ ಈ ಮಾತುಗಳನ್ನು ದೂತರು ಹೇಳುತ್ತಿದ್ದಾರೆಂಬುದನ್ನು ಮರೆಯು ವುದು ಸಾಧ್ಯವಿಲ್ಲ. ಅದಕ್ಕೇ ಲಕ್ಷ್ಮೀಶ ಈ ಮಾತಿನಬ್ಬರವನ್ನೆಲ್ಲ ತೆಗೆದು ದೂತರಿಂದ ಸೀತೆಯ ಬಗ್ಗೆ ಆಡಿದ ಅಪವಾದದ ಮಾತನ್ನು ಸೂಚಿಸಿ ಮುಗಿಸಿ ತನ್ನ ಔಚಿತ್ಯ ಪ್ರಜ್ಞೆಯನ್ನು ಮೆರೆ ಯುತ್ತಾನೆ. ದೂತನ ಪಾತ್ರಕ್ಕೆ ಘನತೆ ಪ್ರಾಪ್ತವಾಗಿದೆ.

ಅಪವಾದದ ಮಾತುಗಳನ್ನು ಕೇಳಿದ ಮೇಲೆ ಜೈಮಿನಿಯ ರಾಮ ಅಗ್ನಿಪ್ರವೇಶಮಾಡಿ ಪರಿಶುದ್ಧಳೆಂದು ಖ್ಯಾತಳಾದವಳನ್ನು ಹೀಗೆ ನಿಂದಿಸುತ್ತಾರಲ್ಲ ಎಂದು ವ್ಯಥೆಪಟ್ಟು ಸೀತೆಯನ್ನು ತ್ಯಜಿ ಸಲೋ, ಬೇಡವೋ ಎಂದು ಬಹುಕಾಲ ಚಿಂತಿಸುತ್ತಿದ್ದಂತೆ ಬೆಳ ಗಾಯಿತೆನ್ನುತ್ತಾನೆ. ಶ್ರೋತ್ರಿಯ ಬ್ರಾಹ್ಮಣನು ಆಚಾರಗಳನ್ನು ಬಿಡಲು ವ್ಯಥೆಪಡುವಂತೆ ತಾವರೆಯಂಥ ಮುಖವುಳ್ಳ ಮೃಗ ಶಾಬಾಕ್ಷಿ ಸೀತೆಯನ್ನು ಹೇಗೆ ಬಿಡಲೆಂದು ಸೀತೆಯ ಬಗ್ಗೆ ಚಿಂತಿಸುತ್ತಾನೆ ಜೈಮಿನಿಯ ರಾಮ. ಸೀತೆಯ ತಾವರೆಯ ಮುಖದ ಸೊಗಸನ್ನು ಜಿಂಕೆ ಮರಿಯ ಕಣ್ಣುಗಳಂತಹ ಕಣ್ಣುಗಳ ಸೌಂದರ್ಯ ವನ್ನು ಪರಿಭಾವಿಸುವ ಸಮಯವೇನು ಇದು? ಆದರೆ ಲಕ್ಷ್ಮೀಶ ಈ ಭಾಗವನ್ನು ಚಿತ್ರಿಸಿದ ರೀತಿ ತುಂಬ ಪ್ರಶಂಸಾರ್ಹವಾದುದು. ದೂತನಿಂದ ಸೀತೆಯ ಬಗ್ಗೆ ಸುದ್ದಿಯನ್ನು ಕೇಳುತ್ತಲೆ ರಾಮ ಮೌನಗೊಳ್ಳುತ್ತಾನೆ. ಅವನು ಮೌನಗೊಳ್ಳುವುದು ಹೇಗೆ? ಅಥವಾ ಆ ಮೌನ ಮೌನವೇ? ಎಂದು ಪ್ರಶ್ನಿಸಿದರೆ ಕವಿ ಕೊಡುವ 'ಸೆರೆಗೆ ಬಿದ್ದ ಮದ್ದಾನೆ ತನ್ನ ತಲೆಯನ್ನು ಅತ್ತಿತ್ತ ಆಡಿಸುವಂತೆ' ಎನ್ನುವ ಮತ್ತು 'ಹುತ್ತವನ್ನು ಪ್ರವೇಶಿಸುವ ಸರ್ಪರಾಜನಂತೆ' ಎನ್ನುವ ಉಪಮಾನಗಳು ಜೈಮಿನಿ ರಾಮನ

ಬಾಯಲ್ಲಿ ಆಡಿಸಿದ ಮಾತುಗಳಲ್ಲಿ ಹೇಳಲಾಗದೆ ಹೋದ ಅನೇಕ ಅಂಶಗಳನ್ನು ಧ್ವನಿಸುತ್ತವೆ. ಸೆರೆಸಿಕ್ಕ ಮದ್ದಾನೆಯ ಚಿತ್ರದಲ್ಲಿ ರಾಮನ ಅಸಹಾಯಕ ಸ್ಥಿತಿಯಿದೆ. ಅಲ್ಲದೆ ತನ್ನ ತಲೆಯನ್ನು ಅತ್ತಿತ್ತ ಆಡಿಸುವ ಚಿತ್ರ ಇನ್ನೂ ಅರ್ಥಪೂರ್ಣ. ಸೀತೆಯಂಥವ ಳನ್ನು ಕುರಿತು ಇಂಥ ಮಾತು ಬಂದಿತಲ್ಲ ಎನ್ನುವ ಆಶ್ಚರ್ಯ, ಸೀತೆಯನ್ನು ಕುರಿತು ಇಂಥ ಮಾತನ್ನು ನಾನು ಒಪ್ಪಲಾರೆ ಎನ್ನುವ ಭಾವನೆ, ಸೀತೆಯಂಥವಳನ್ನು ನಾನು ಬಿಡುವುದು ಸಾಧ್ಯವಿಲ್ಲ ಎಂಬ ಯೋಚನೆ ಹೀಗೆ ಅರ್ಥವನ್ನು ಬೆಳೆಸಿಕೊಂಡೇ ಹೋಗುತ್ತದೆ ಮದ್ದಾನೆಯ ಉಪಮೆ. ಸೆರೆಯಲ್ಲಿ ಬಿದ್ದ ಮದ್ದಾ ನೆಯ ಚಿತ್ರದಲ್ಲಿ ತಡೆದುಕೊಳ್ಳಲಾಗದ ಅಸಹಾಯಕತೆಯ ಅರ್ಥ ಎಷ್ಟಿದೆಯೋ ಅಷ್ಟೇ ಇನ್ನು ಆ ಮದ್ದಾನೆಯ ತೀರ್ಮಾನ ಮತ್ತು ಕಾರ್ಯ ಅನಾಹುತಕಾರಿಯಾಗಬಲ್ಲುದೆಂಬ ಸೂಚನೆಯೂ ಇದೆ. ಮುಂದಂತೂ ಲಕ್ಷ್ಮೀಶ ಕವಿಯ ರಾಮನ ಮೌನ ತಾನೇ ಭಾಷ್ಯ ವಾಗುತ್ತದೆ ರಾಮನ ಮನಸ್ಸಿನ ಭಾವನೆಗಳಿಗೆಲ್ಲ. ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತಾನೆ ರಾಮ. ನಿಂತುಕೊಳ್ಳುತ್ತಾನೆ. ಲೋಕದ ರೀತಿಗೆ ಆಶ್ಚರ್ಯಗೊಳ್ಳುತ್ತಾನೆ. ಮನಸ್ಸಿನಲ್ಲಿ ಎಲ್ಲವನ್ನೂ ಮತ್ತೆ ಮತ್ತೆ ನೆನಪು ಮಾಡಿಕೊಳ್ಳುತ್ತಾನೆ. ನೋಯುತ್ತಾನೆ. ನಿಡಿದಾಗಿ ನಿಟ್ಟುಸಿರು ಬಿಡುತ್ತಾನೆ. ಮುಂದೆ ಏನಾಗುತ್ತದೆಯೋ ಎಂದು ಗಾಬರಿಗೊಳ್ಳುತ್ತಾನೆ. ದುಃಖದಿಂದ ಕಳೆಗುಂದುತ್ತಾನೆ. ಇಷ್ಟೆಲ್ಲ ಹೇಳಿದ ಮೇಲೆ ಈ ಮೌನಕ್ಕೆ ಕಲಶವಿಟ್ಟಂತೆ ಹುತ್ತ ವನ್ನು ಪ್ರವೇಶಿಸುತ್ತಿರುವ ಸರ್ಪರಾಜನ ಚಿತ್ರ. ಬಾಧಿತವಾದ ರಾಮನ ಮನಸ್ಸಿನ ತಳಮಳವೆಲ್ಲ ಎಳೆಎಳೆಯಾಗಿ ಕಾಣಿಸಿಕೊಳ್ಳು ತ್ತದೆ. ಈ ಪದ್ಯದಲ್ಲಿ ಬಾಯಿಬಿಟ್ಟು ಬಣ್ಣಗೇಡಾಗದೆ ಮೌನ ಗೊಂಡ ಕವಿ ಲಕ್ಷ್ಮೀಶ ಕಾವ್ಯವನ್ನು ಶಕ್ತಿಪೂರ್ಣ ಮಾಡುತ್ತಾನೆ. ತನ್ನನ್ನು ನೋಡಲು ಬಾಗಿಲಿಗೆ ಬಂದ ರಾಜಮಹಾರಾಜರಿಗೂ

ಮುಖಕೊಡದೆ ಚಿಂತೆಯಿಂದ ಕೂಡಿರುವ ರಾಮನ ಸ್ಥಿತಿಯನ್ನು ಕೇಳಿ ಲಕ್ಷ್ಮಣಾದಿಗಳು ಬರುತ್ತಾರೆ. ಆದರೆ ರಾಮನ ಮುಖವನ್ನು ನೋಡಿದಮೇಲೆ ಅವರಿಗೂ ಮಾತನಾಡಲು ನಾಲಗೆಯೇಳುವುದಿಲ್ಲ. ಆಗ ರಾಮನೇ ತಮ್ಮಂದಿರನ್ನು ಮಾತಾಡಿಸುತ್ತಾನೆ. ತಾನು ಸೀತಾದೇವಿಯನ್ನು ಬಿಟ್ಟಲ್ಲದೆ ಇರೆನು ಎಂದು ಘೋಷಿಸಿಬಿಡುತ್ತಾನೆ. ಜೈಮಿನಿ ಕೊಡುವ ಹಲವಾರು ಪುಟ್ಟ ವಿವರಗಳು ಅನಗತ್ಯವಾದ್ದರಿಂದ ಲಕ್ಷ್ಮೀಶ ಅವನ್ನು ತೇಲಿಸಿದ್ದಾನೆ.

ಮುಂದೆ ಭರತ ಶತ್ರುಘ್ನ ಮತ್ತು ಲಕ್ಷ್ಮಣರು ಸೀತೆಯನ್ನು ಬಿಡುವುದುಚಿತವಲ್ಲ ಎಂದು ಪ್ರತಿಭಟಿಸಿ, ರಾಮನನ್ನು ಒತ್ತಾಯಪಡಿಸುವ ಮಾತುಗಳು ಮೂಲದಲ್ಲಿ ಚೆನ್ನಾಗಿವೆ. ಅವರ ಮಾತಿನ ಸಾರವನ್ನು ಲಕ್ಷ್ಮೀಶ ಕನ್ನಡಕ್ಕಿಳಿಸಿದ್ದಾನೆ. 'ಮಮತೆಯಂ ಮಹಾಯೋಗಿ ಬಿಡುವಂತೆ,' 'ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ' ಉಪಮೆಗಳೂ ಕನ್ನಡಕ್ಕೆ ಬಂದಿವೆ. ಸೋದರರ ಒತ್ತಾಯ ಪ್ರತಿಭಟನೆಗಳಿಗೆ ಉತ್ತರವಾಗಿ ರಾಮ ಯಶಸ್ಸಿಗಾಗಿ ಎಲ್ಲವನ್ನೂ ತ್ಯಾಗಮಾಡಿದವರ ಕಥೆಗಳ ವಿವರವನ್ನೆ ಕೊಟ್ಟಿದ್ದನ್ನು ಲಕ್ಷ್ಮೀಶ ತೇಲಿಸಿ ಕಥೆಯ ವೇಗ ಹೆಚ್ಚುಮಾಡಿದ್ದಾನೆ. ಮೂಲದಲ್ಲಿ ಬರುವ ಶ್ರೋತ್ರಿಯರಾದ ಬ್ರಾಹ್ಮಣರು ವೇದವನ್ನು ಬಿಡುವಂತೆ ನೀನು ಸೀತೆಯನ್ನು ಬಿಡುತ್ತಿದ್ದೀಯೆ ಎನ್ನುವ ಮಾತಿನಲ್ಲಿ ರಾಮನ ವರ್ತನೆಯನ್ನು ಖಂಡಿಸುವ ತೀಕ್ಷ್ಣತೆಯಿದೆ. ಮುಂದೆ ಲಕ್ಷ್ಮಣ ನೀನು ಸೀತೆಯನ್ನು ಬಿಟ್ಟುಬಾ. ಆ ಪಾಪದ ಹೊಣೆ ನನ್ನಮೇಲಿರಲಿ. ನಿನ್ನ ಕಾಲಿಗೆ ಬೀಳುತ್ತೇನೆ ನಾನು. ನನ್ನ ಆಜ್ಞೆಯನ್ನು ನಡಸು ಎಂಬ ಮಾತಿಗೆ ಲಕ್ಷ್ಮಣನ ಪ್ರತಿಕ್ರಿಯೆ ಜೈಮಿನಿಯಲ್ಲಿ ನೋಡಿ ಹೇಗಿದೆ:

('ನಿಷ್ಪಿಷ್ಯ ಪಾಣಿನಾ ಪಾಣಿಂ ನಿಃಶ್ವಸನ್ನುರಗೋಯಥಾ') ಸರ್ಪದಂತೆ ಬುಸುಗುಟ್ಟುತ್ತಾ ಕೈ ಕೈ ಹೊಸಕಿಕೊಳ್ಳುತ್ತಿರುವ ಜೈಮಿನಿಯ ಚಿತ್ರ–ಲಕ್ಷ್ಮಣನ ಅದಮ್ಯ ಕೋಪ, ಅಸಹನೆ ಕೊನೆಗೆ ಅಸಹಾಯಕತೆಗಳು ಚೆಲುವಾಗಿ ಮೂಡಿವೆ. ಹೇಗೋ ಏನೋ ಈ ಚಿತ್ರಗಳು ಲಕ್ಷ್ಮೀಶನಲ್ಲಿ ಎಡೆಪಡೆದಿಲ್ಲ. ಸಂಗ್ರಹಕಾರನಾಗಿ ಲಕ್ಷ್ಮೀಶ ಕೆಲವೊಮ್ಮೆ ಮೂಲದ ಇಂಥ ಸೊಗಸಾದ ಭಾಗಗಳನ್ನು ಅಲಕ್ಷಿಸಿದ್ದಾನೆ.

ಸೀತಾದೇವಿಯನ್ನು ಕಾಡಿಗೆ ಕರೆದೊಯ್ಯಲು ಮಾರನೆಯ ದಿನ ಮುಂಜಾನೆ ಲಕ್ಷ್ಮಣ ರಥದಲ್ಲಿ ಹೊರಟು ಸೀತಾದೇವಿಗೆ ತಿಳಿಸುತ್ತಾನೆ. ಲಕ್ಷ್ಮಣನ ಮನಸ್ಸಿನಲ್ಲಿರುವ ಆತಂಕ ತುಮುಲಗಳು ಸಂಸ್ಕೃತ ಕನ್ನಡಗಳೆರಡರಲ್ಲೂ ಚೆಲುವಾಗಿ ಮೂಡಿವೆ. ಸೀತೆ ಋಷ್ಯಾಶ್ರಮಗಳಿಗೆ ಹೋಗುವ ಮೊದಲು ಕೌಸಲ್ಯಾದಿಗಳಿಗೆ ಹೇಳಿ ಆಶೀರ್ವಾದ ಪಡೆದು ಬರುವ ಸಂದರ್ಭದಲ್ಲಿ ಜೈಮಿನಿ ಭಾರತ ಸ್ವಲ್ಪ ನೀರಸವಾಗುತ್ತದೆ; ಸೀತೆ ಆಶೀರ್ವಾದಕ್ಕೆ ಬಂದಾಗ ಕೌಸಲ್ಯೆ ಮತ್ತು ಸುಮಿತ್ರೆಯರು ಕಾಡಿಗೆ ಹೋಗಬೇಕಾಗಿಲ್ಲವೆಂದು ಸುದೀರ್ಘವಾಗಿ ಬೋಧಿಸುವ ಮಾತುಗಳಿವೆ. ಲಕ್ಷ್ಮೀಶ ಒಂದೇ ಷಟ್ಪದಿಯಲ್ಲಿ ಬಹು ಅರ್ಥಪೂರ್ಣವಾಗಿ ಇದನ್ನು ಚಿತ್ರಿಸಿರುವ ರೀತಿ ಇದು:

ಅಂಬುಜಾನನೆ ಬಳಿಕ ಪಯಣಮಂ ನಿಶ್ಚೈಸಿ
ಸಂಬಿದರಭೀಷ್ಟಮಂ ಸಲಿಸುವ ಕೃಪಾಳು ತಾ
ನೆಂಬುದಂ ಕಾಣಿಸಿದನಿಂದೆನ್ನ ಕಾಂತನೆನಗೆಂದು ಕೌಸಲೆಗೆ ಪೇಳ್ದು ॥
ಮುಂಬರಿದೊಡಂಬಡಿಸಿ ಬಲವಂದು ಕಾಲ್ಗೆರಗಿ
ತುಂಬಿದ ಪರಕೆವೆತ್ತು ಕೈಕೆಯಾ ದೇವಿಗೆ ಶಿ
ರಂಬಾಗಿ ವರಸುಮಿತ್ರೆಗೆ ನಮಿಸಿ ಸಖಿಯರಂ ಸಂತೈಸಿ ಬೀಳ್ಕೊಂಡಳು ॥

ಅನಂತರ ಸೀತೆ ಋಷಿಪತ್ನಿಯರಿಗೆ ಅರಿಸಿನ ಕುಂಕುಮ, ಶ್ರೀ ಗಂಧಾದಿ ಲೇಪನಗಳನ್ನೂ, ವಿವಿಧ ವಸ್ತ್ರಾಭರಣಗಳನ್ನೂ, ಮತ್ತು ಶ್ರೀರಾಮನ ಪಾದುಕೆಗಳನ್ನೂ ತಂದು ರಥದಲ್ಲಿಟ್ಟು ಸಂಭ್ರಮಂಗೊಳ್ಳುತ್ತಾಳೆ. ಸೀತೆಯನ್ನು ಕಾಡಿನಲ್ಲಿ ಬಿಟ್ಟು ಬರುವ ಆಜ್ಞೆಯನ್ನು ತಲೆಯಲ್ಲಿ ಹೊತ್ತ ಲಕ್ಷ್ಮಣನೂ ರಥದಲ್ಲಿದ್ದಾನೆ. ನೋಡುತ್ತಿದ್ದಾನೆ. ಎಂಥ ಕರುಣಾಜನಕ ಚಿತ್ರ ಇದು!

ರಥ ಮುಂದೆ ಹೊರಡುತ್ತದೆ. ಚಲಿಸುವ ರಥದ ಪತಾಕೆ ಸೀತೆಯನ್ನು ರಾಮನೇ ಪರಿತ್ಯಜಿಸಿದನಲ್ಲಾ ಎಂದು ಅಡಿಗಡಿಗೆ ಅಯ್ಯೋ ಅಯ್ಯೋ ಎಂದು ತಲೆಕೊಡಹುವಂತೆ ಆಡಿತು. ಲಕ್ಷ್ಮಣನಂತೂ ಇಂಥ ಕರುಣವಿಲ್ಲದ ಕಾರ್ಯಕ್ಕೆ ಸಿದ್ಧವಾದ ತನ್ನ ದುರ್ವಿಧಿಗೆ ಮರುಗಿ ಕಲ್ಮನನಾಗಿ ಕುಳಿತನು.

ಲಕ್ಷ್ಮೀಶ ಇಲ್ಲಿಂದ ಮುಂದೆ ಕಥೆಯನ್ನು ನೇರವಾಗಿ ಹೇಳುತ್ತ ಹೋಗುತ್ತಾನೆ. ಜೈಮಿನಿಯಲ್ಲಿ ಅತಿಯಾಗಿರುವ ಅಪಶಕುನಗಳ ವರ್ಣನೆಯಲ್ಲಿ ಉಚಿತವಾದಷ್ಟನ್ನು ಉಳಿಸಿಕೊಂಡು ಲಕ್ಷ್ಮೀಶ ಕಥೆಯನ್ನು ಮುಂದುವರಿಸುತ್ತಾನೆ. ಆದರೆ ವಿಷಯಾಂತರ ಮಾಡುವ ಅತಿಯಾದ ಅಪಶಕುನಗಳ ವರ್ಣನೆಯ ವಿಷಯದಲ್ಲಿ ಔಚಿತ್ಯವನ್ನು ಸಾಧಿಸಿದ ಲಕ್ಷ್ಮೀಶ ಈ ಕಾಡನ್ನು ನೋಡು ನೋಡುತ್ತ ಸೀತೆಗೆ ಮರುಕಳಿಸಿದ ಈ ಹಿಂದಿನ ವನವಾಸದ ನೆನಪುಗಳ ಸೊಗಸನ್ನು ತೇಲಿಸಿಬಿಟ್ಟಿದ್ದಾನೆ.

ರಥವು ಚಲಿಸುತ್ತ ಹೋದಂತೆ ಮುಂದೆ ಗಂಗಾನದಿ ಕಾಣಿಸುತ್ತದೆ. ಗಂಗಾನದಿಯನ್ನು ನಾವೆಯೊಂದರಲ್ಲಿ ದಾಟಿ ಪವಿತ್ರ ತೀರ್ಥವೊಂದರಲ್ಲಿ ಲಕ್ಷ್ಮಣ ಸೀತೆಯರು ಮಿಂದು ಮುಂದು ವರಿಯುತ್ತಾರೆ. ಹೊರಟದ್ದು ಋಷಿಪತ್ನಿಯರನ್ನು ಕಾಣುವುದಕ್ಕೆ.

ಆದರೆ ಬಹಳ ಹೊತ್ತು ನಡೆದರೂ ಋಷ್ಯಾಶ್ರಮಗಳ ಸುಳಿವೇ ದೊರೆಯುವುದಿಲ್ಲ. ದಾರಿ ತಪ್ಪಿರಬೇಕು ಅನ್ನಿಸುತ್ತದೆ.

ಎಲ್ಲಿ ಮುನಿಪೋತ್ತಮರ ಪಾವನದ ವನದೆಡೆಗ
ಳೆಲ್ಲಿ ಸಿದ್ಧಾಶ್ರಮಂಗಳ ಮಂಗಳಸ್ಥಳಗ
ಳೆಲ್ಲಿ ಸುಹವಿಗಳ ಕಂಪೊಗೆದ ಪೊಗೆದಳೆದಗ್ನಿಹೋತ್ರದ ಕುಟೀರಂಗಳು ॥
ಎಲ್ಲಿ ಪರಿಚಿತವಾದ ವಾದ ವೇದ ಧ್ವನಿಗ
ಳಿಲ್ಲಿಗೊಯ್ಯದೆ ದಾರು ದಾರುಣದ ಕಟ್ಟಡವಿ
ಗಿಲ್ಲಿಗೇಕೈತಂದೆ ತಂದೆ ಸೌಮಿತ್ರಿ ಹೇಳೆಂದು ಜಾನಕಿ ಬಿಸುಸುಯ್ದಳು ॥

ಜಾನಕಿ ಪ್ರಶ್ನಿಸಿ ನಿಟ್ಟುಸಿರುಬಿಟ್ಟಳು. ಪಾವನಕ್ಕ ಪಾವನವಾದ ರಾಮನೇ ಇದ್ದಾಗ ಆತನ ಪಾದಗಳನ್ನು ತೊರೆದು ಬಂದ ತನ ಗೀಗ ಪುಣ್ಯಾಶ್ರಮಗಳು ಗೋಚರಿಸಬಲ್ಲವೇ ಎಂದು ವ್ಯಥೆಗೊಳ್ಳು ತ್ತಾಳೆ. ಲಕ್ಷ್ಮಣನ ಸ್ಥಿತಿ ಇದಕ್ಕೂ ಹೆಚ್ಚು ಕಷ್ಟಕರವಾದುದು. ಕಣ್ಣೀರುಕ್ಕಿತು. ತುಟಿಗಳಲುಗಿದವು. ಅಲಗನ್ನಿಕ್ಕಿ ಒಡಲಲ್ಲಿ ತಿರು ಗಿಸಿದಂತಾಯಿತು. ಉಸಿರು ಕಟ್ಟಿತು. ಅವಯವಗಳು ಕಂಪಿಸಿ ದುವು. ಬುದ್ಧಿಯು ಕದಡಿತು. ಗಂಟಲಲ್ಲಿಯೇ ಆಡುವ ಮಾತು ಗಳು ಸಿಕ್ಕಿಕೊಂಡವು. ಗದ್ಗದಸ್ವರದಿಂದ ತನ್ನ ಕರ್ತವ್ಯವನ್ನು ನಿರ್ವಹಿಸಲು ಸಿದ್ಧನಾದನು.

ದೇವಿ ನಿನಗಿನ್ನೆಗಂ ಪೇಳ್ದುದಿಲ್ಲಪವಾದ
ಮಾವರಿಸಿ ನಿನ್ನನೊಲ್ಲದೆ ರಘುಕುಲೋದ್ಭವಂ
ನೀವರಿಸಿ ಬಿಟ್ಟು ಕಾಂತಾರಕ್ಕೆ ಕಳುಹಿ ಬಾಯೆಂದೆನಗೆ ನೇಮಿಸಿದೊಡೆ ॥
ಆ ವಿಭುವಿನಾಜ್ಞೆಯಿಂ ಮೀರಲರಿಯದೆ ನಿಮ್ಮ
ನೀ ವಿಪಿನಕೊಡಗೊಂಡು ಬಂದೆನಿನ್ನೊಯ್ಯೊಯ್ಯೆ
ನಾವಲ್ಲಿಗಾದೊಡಂ ಪೋಗೆಂದು ಲಕ್ಷ್ಮಣಂ ಬಾಷ್ಪಲೋಚನನಾದನು ॥

ಕತ್ತರಿಯ ಮಧ್ಯೆ ಸಿಕ್ಕಿಕೊಂಡ ಗೋಟಡಕೆಯ ಸ್ಥಿತಿ ಲಕ್ಷ್ಮಣ ನದು. ಕವಿ ಅರ್ಥಪೂರ್ಣವಾಗಿ, ಭಾವಪೋಷಕವಾಗಿ ವಿವರಿಸಿರುವ

ಪದ್ಯದ ಅರ್ಥವನ್ನು ಚರ್ವಣಮಾಡಿ ಮಾಡಿ ಅರಿಯಬೇಕು. 'ಇಲ್ಲಿ ಕಾಡಿಗೆ ಕರೆತಂದಿದ್ದೇನೆ, ರಾಮನಾಜ್ಞೆಯನ್ನು ಮೀರ ಲಾಗದೆ ಇಲ್ಲಿ ನಿಮ್ಮನ್ನು ಬಿಟ್ಟಿದ್ದೇನೆ. ಇನ್ನು ಎಲ್ಲಿಗಾದರೂ ಹೋಗಿ' ಎಂದ ಲಕ್ಷ್ಮಣ. ಕಣ್ಣೀರು ತುಂಬಿದುವು. ಲಕ್ಷ್ಮಣ ಅಣ್ಣ ನಾಜ್ಞೆಯನ್ನು ಹೇಳಿದ. ಆದರೆ ಅದನ್ನು ಕೇಳಿದ ಸೀತೆಯ ಸ್ಥಿತಿ ಹೇಗಾಗಬೇಡ!

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ
ಮುರಿದಿಳೆಗೊರಗುವಂತೆ ಲಕ್ಷ್ಮಣನ ಮಾತು ಕಿವಿ
ಧರೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆ ಧರೆಗೆ ನಡುನಡುಗುತೆ
ಮರೆದಳಂಗೋಪಾಂಗಮಂ ಬಳಿಕ ಸೌಮಿತ್ರಿ
ಮರುಗಿ ಕಣ್ಣೀರ್ದಳಿದು ಪತ್ರದೊಳ್ ಕೊಡೆವಿಡಿದು
ಸೆರಗಿಂದೆ ಬೀಸಿ ರಾಮನ ಸೇವೆ ಸಂದುದೇ ತನಗೆಂದು ರೋದಿಸಿದನು.

'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆ ಗೊರಗುವಂತೆ' ಎನ್ನುವ ಈ ಉಪಮೆಯು ಸೊಗಸು ಪೂರ್ಣವಾಗಿ ಲಕ್ಷ್ಮೀಶನದು. ಅದರಲ್ಲಿ ಸೀತಾದೇವಿ ತುಂಬು ಗರ್ಭಿಣಿಯಾಗಿದ್ದ ಳೆನ್ನುವುದನ್ನು ಗಮನಿಸಿದಾಗ ಈ ಉಪಮೆಯನ್ನು ಲಕ್ಷ್ಮೀಶ ಬಳಸಿರುವ ರೀತಿ ಅಸ್ವಾದ್ಯಶವಾಗಿ ತೋರುತ್ತದೆ. ಜೈಮಿನಿ ಯಲ್ಲಾದರೆ ಸೀತೆ ಈ ಸುದ್ದಿ ಕೇಳಿ ಕೆಳಕ್ಕುರುಳಿದ ಸಂದರ್ಭ ಹೀಗಿದೆ:

ಇತಿ ತಸ್ಯ ವಚಃ ಶ್ರುತ್ವಾ ಪಪಾತ ಧರಣೀತಲೇ
ಮೂರ್ಛಿತಾ ಜಾನಕೀ ತಸ್ಮಿನ್ನಂಬರಾದ್ ರೋಹಿಣೀ ಯಥಾ

'ಈ ಮಾತನ್ನು ಕೇಳುತ್ತಲೇ ಜಾನಕಿಯು ಆಕಾಶದಿಂದ ರೋಹಿಣಿಯು ಉರುಳಿಬಿದ್ದಂತೆ ಭೂಮಿಗೆ ಬಿದ್ದಳು' ಎಂಬ

ಮಾತಿಗೂ 'ಬಿರುಗಾಳಿ ಬೀಸಿದಾಗ ಗೊನೆಬಿಟ್ಟ ಬಾಳೆ ಕಂಪಿಸಿ ಕಂಪಿಸಿ ಹಾಗೆಯೇ ಭೂಮಿಗೆ ಕುಸಿದುಬೀಳುವಂತೆ ನಡುನಡು ಗುತ್ತ ಸೀತೆ ಬಿದ್ದಳು' ಎಂಬ ಮಾತಿಗೂ ಎಷ್ಟೊಂದು ಅಂತರ. ಸೀತೆ ಬಿದ್ದದ್ದೇನೋ ನಿಜವೇ. 'ಫಲಿತ ಕದಳಿ' ಎಂಬ ಮಾತುಗಳು ತುಂಬು ಗರ್ಭಿಣಿಯಾದ ಸೀತೆಯ ಸ್ಥಿತಿಯನ್ನೂ 'ಕಂಪಿಸಿ ಮುರಿ ದಿಳೆಗೊರಗುವಂತೆ' ಎಂಬ ಮಾತುಗಳು ಸೀತೆ ಕುಸಿದುಬಿದ್ದ ರೀತಿಯನ್ನೂ ಅರ್ಥಪೂರ್ಣವಾಗಿ ಧ್ವನಿಸುತ್ತವೆ. ಲಕ್ಷ್ಮೀಶ ಧ್ವನಿ ರಮ್ಯವೂ ಅರ್ಥಪೂರ್ಣವೂ ಆದ ಈ ಉಪಮೆಯನ್ನು ತನ್ನ ದಾಗಿ ಮಾಡಿಕೊಂಡಿದ್ದಾನೆ. ಮೂಲದಲ್ಲಿ ಒಂದೆಡೆ ಈ 'ಕದಳಿ ಮುರಿದಿಳೆಗೊರಗುವಂತೆ' ಉಪಮಾನವಿದೆ. ಆದರೆ ಲಕ್ಷ್ಮೀಶ ತುಂಬು ಗರ್ಭಿಣಿಯಾದ ಸೀತೆ ಸಿಡಿಲಿಗೆ ಸಮಾನವಾದ ಮಾತು ಗಳನ್ನು ಕೇಳಿದಾಗ ಹೇಗೆ ವರ್ತಿಸಿದಳು ಎನ್ನುವಾಗ ಈ ಉಪಮೆ ಯನ್ನು ಬಳಸಿದ್ದಾನೆ, 'ಫಲಿತ' ಎನ್ನುವ ಮಾತು ಈತನದೇ. ಈ ಒಂದು ಪದ ಸೇರಿಸಿ ಇಡೀ ಉಪಮೆಯನ್ನು ತನ್ನದಾಗಿಸಿ ಕೊಂಡದ್ದೇ ಅಲ್ಲದೆ ಜೈಮಿನಿಗಿಂತ ಅದ್ಭುತವಾಗಿ ಈ ಚಿತ್ರವನ್ನು ಮೂಡಿಸಿದ್ದಾನೆ. ಸೀತೆಯ ಕೋಮಲತೆ, ಗರ್ಭಿಣಿಯಾಗಿರುವ ಸ್ಥಿತಿ ಇವುಗಳು ಚೆಲುವಾಗಿ ಬಿಂಬಿತವಾಗಿವೆ. ಜೈಮಿನಿ ಇದೇ ಸಂದರ್ಭದಲ್ಲಿ ಕೊಡುವ ಆಕಾಶದಿಂದ ರೋಹಿಣಿ ಬಿದ್ದ ಚಿತ್ರ ಬಹಳ ಪೇಲವಾಗಿದೆ.

ಮೂರ್ಛಿತಳಾದ ಸೀತೆಯನ್ನು ಎಚ್ಚರಿಸಲು ಪ್ರಯತ್ನಿಸಿ ತಾನು ರಾಮನ ಸೇವೆಮಾಡಿದ್ದು ಸತ್ಯವಾದರೆ ಸೀತೆಗೆ ಎಚ್ಚರ ಬರಲಿ ಎನ್ನುತ್ತಾನೆ ಜೈಮಿನಿಯ ಲಕ್ಷ್ಮಣ. ಆದರೆ ಲಕ್ಷ್ಮೀಶನಲ್ಲಿ ಹೀಗಿಲ್ಲ. 'ರಾಮನ ಸೇವೆ ಸಂದುದೇ ತನಗೆ' ಎಂದು ರೋದಿ ಸುತ್ತಾನೆ. ಲಕ್ಷ್ಮೀಶನ ಲಕ್ಷ್ಮಣನ ವೈಶಿಷ್ಟ್ಯ ಇದು. ಅಣ್ಣ ನಾಜ್ಞೆಯ ಗರಗಸಕ್ಕೆ ಸಿಕ್ಕಿದ ಆತನ ತುಮುಲ ಸ್ಥಿತಿಯನ್ನೂ

ರಾಮನ ಸೇವೆಯನ್ನು ಇನ್ನೇಕೆ ನಿಲ್ಲಿಸಿಬಿಡಬಾರದೆನ್ನುವವರೆಗೆ ಆತನ ಮನಸ್ಸಿನ ತುಯ್ತವಿರುವುದನ್ನೂ ಕವಿ ಸೂಚಿಸಿದ್ದಾನೆ,

ಬಿಟ್ಟನೆ ರಘುಶ್ರೇಷ್ಠನೆನ್ನನಕಟಕಟ ತಾ
ಮುಟ್ಟನೆ ನೆಗಳ್ದ ಬಾಳ್ಕೆಗೆ ಸಂಚಕಾರಮಂ
ಕೊಟ್ಟನೆ ಸುಮಿತ್ರಾತನುಜ ಕಟ್ಟರಣ್ಯದೊಳ್ ಕಳುಹಿ ಬಾಯೆಂದು
ನಿನಗೆ ॥

ಕೊಟ್ಟನೆ ನಿರೂಪವಂ ತಾನೆನ್ನ ಕಣ್ಬಟ್ಟೆ
ಗೆಟ್ಟನೆ ಮನೋವಲ್ಲಭನನಗಲ್ದಡವಿಯೊಳ್
ನೆಟ್ಟನೆ ಪಿಶಾಚದವೊಲೆಂತಿಹೆನೊ ಕೆಟ್ಟೆನಕಟಾಯೆಂದೊರಲ್ದಳಬಲೆ ॥

ಎಂದು ಕೌಶಿಕ ಮುನಿಪನೊಡನೆ ಮಿಥಿಲಾಪುರಕೆ
ಬಂದು ಹರಧನುವ ಮುರಿದೆನ್ನಂ ಮದುವೆಯಾದ
ನಂದುಮೊದಲಾಗಿ ರಮಿಸಿದನೆನ್ನೊಳಾನಗಲ್ದೊಡೆ ತಾಂ ನವೆದನಲ್ಲದೆ ॥
ಒಂದಿದನೆ ಸೌಖ್ಯಮಂ ರಾಮನೆನಗಾಗಿ ಕಪಿ
ವೃಂದಮಂ ನೆರಪಿ ಕಡಲಂ ಕಟ್ಟಿ ದೈತ್ಯರಂ
ಕೊಂದಗ್ನಿಮುಖದೊಳ್ ಪರೀಕ್ಷಿಸಿದನೆನ್ನೊಳಪರಾಧಮಂ ಕಾಣಿಸಿದನೇ॥

ಕಲ್ಮುಳ್ಳಿಡಿದ ಕಾಡೊಳಂದೆನ್ನನುಪಚರಿಸಿ
ಪಲ್ಮೊರೆದು ಗರ್ಜಿಪ ವಿರಾಧನಂ ಮರ್ದಿಸಿದೆ
ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ ಪೋದೆ ರಾಘವನ ಬಳಿಗೆ ॥
ನಲ್ಮೆಯಿಂ ಮರೆದಪೆನೆ ಸೌಮಿತ್ರಿ ನೀನೆಲ್ಲ
ರೊಲ್ಮೆಯ್ದುನನೆ ತನಗೆ ಕಾನನದೊಳಿನ್ನಿಲಿ
ಸಲ್ಮನಂ ಬಂದಪುದೆ ತಂದೆ ನಿನಗೆಂದು ಕಂಬನಿ ಮಿಡಿದಳಂಬುಜಾಕ್ಷಿ ॥

ಈ ಮೂರು ಪದ್ಯಗಳಲ್ಲಿಯೂ ಸೀತೆಯ ಶೋಕ ಅಸಹಾಯ ಕತೆಗಳು ಮಡುಗಟ್ಟಿ ನಿಂತಿವೆ. ದೊಡ್ಡಕವಿ ಮಾತ್ರ ಸಾಧಿಸಲು ಸಾಧ್ಯವಾದ ಬರವಣಿಗೆ ಇದು.

ಮೊದಲ ಪದ್ಯದಲ್ಲಿ ತನ್ನನ್ನು ರಾಮ ಬಿಟ್ಟಮೇಲೆ ಈ ಕಾಡಿನಲ್ಲಿ ಪಿಶಾಚಿಯಂತಿರಬೇಕಲ್ಲ ಎನ್ನುವ ವ್ಯಥೆಯಿದೆ. ಎರಡನೆಯ

ಪದ್ಯದಲ್ಲಿ ತನ್ನ ಪರವಾಗಿ ರಾಮನಿಗಿದ್ದ ಒಲವಿನ ಆಳದ ವಿವರ ವಿದೆ. ಇಷ್ಟಿದ್ದೂ ಒಮ್ಮೆಯಾಗಲೇ ಅಗ್ನಿಮುಖದಲ್ಲಿ ನನ್ನನ್ನು ಪರೀಕ್ಷಿಸಿಯೂ ಮತ್ತೆ ಅಪರಾಧ ಕಂಡಿತೆ ಎಂಬ ನೋವು ಈ ಪದ್ಯದಲ್ಲಿದೆ. ಮೂರನೆಯ ಪದ್ಯದಲ್ಲಿ ಎಲ್ಲರಂತಲ್ಲದ ಮೈದುನನ ಅದ್ಭುತ ಚಿತ್ರವಿದೆ. ತಾನೇ ಆತನನ್ನು ಕಲ್ಮಸದಿಂದ ಬೈದು ಗದರಿ ಜನಸ್ಥಾನಕ್ಕೆ ಕಳುಹಿಸಿದರೂ ತನ್ನಲ್ಲಿ ಅಪಚಾರವನ್ನೆಣಿಸದ ಈತ ನಿಗೂ ತನ್ನನ್ನು ಬಿಟ್ಟುಬಿಡಲು ಹೇಗೆ ಮನಸ್ಸಾಯಿತು ಎನ್ನುವ ಅಳಲಿದೆ. ಇನ್ನು ಮುಂದಿನ ಎರಡು ಪದ್ಯಗಳಲ್ಲಿ ರಾಮನ ರೂಪನ್ನು ನೆನೆನೆನೆದು ಮತ್ತದನ್ನು ನೋಡಲಾರೆನಲ್ಲ, ನೋಡದೆ ನಾನು ಹೇಗೆತಾನೆ ಬದುಕಲಿ ಎನ್ನುವ ಕುದಿತವಿದೆ.



ಇಂಥ ನೋವನ್ನು ನೋಡುತ್ತ ನಿಂತ ಲಕ್ಷ್ಮಣನಂತೂ 'ತಾಯಿ ನಿನ್ನನ್ನು ಬಿಟ್ಟು ನಾನು ಹೋಗಲಾರೆ; ಒಂದು ಪಕ್ಷ ಹೋಗದೆ ಇಲ್ಲೆ ಉಳಿದರೆ ಅಣ್ಣ ಏನು ಮಾಡುತ್ತಾನೊ' ತಿಳಿಯೆನಲ್ಲ ಎಂದು ಶೋಕಗದ್ಗದನಾಗುತ್ತಾನೆ. ಆಗ ಸೀತೆಯೇ ಆತನನ್ನು ಸಮಾಧಾನಗೊಳಿಸಲು ಯತ್ನಿಸುತ್ತಾಳೆ. ತಂದೆ ಲಕ್ಷ್ಮಣ, ನಿನ್ನನ್ನು ಬಯ್ದುದೇನಾಯಿತು? ಹಿಂದೆ ನಾನು ನಿನ್ನನ್ನು ಗದರಿಕೊಂಡಾಗ ನೀನು ಜನಸ್ಥಾನದಿಂದ ಹೋದೆಯಲ್ಲವೇ, ನನ್ನನ್ನು ಬಿಟ್ಟು? ಈಗಲೂ ಹಾಗೆಯೇ ತಿಳಿದುಕೊಂಡು ನೀನು ಹೋಗು. ನನ್ನನ್ನು ನಾನು ಕೊಂದುಕೊಳ್ಳುವಂತಿಲ್ಲ. ಬಸುರಿನ ತೊಡಕು. ಪಾಲಿಗೆ ಬಂದದ್ದನ್ನು ಉಣ್ಣುತ್ತೇನೆ. ಕೌಸಲ್ಯೆಗೆ ನಮಸ್ಕಾರ ತಿಳಿಸು. ಅವಳ ಮಗ ನಿಷ್ಕಾರಣವಾಗಿ ನನ್ನನ್ನು ಬಿಟ್ಟಿದ್ದನ್ನು ಹೇಳು ಎಂದಳು. ಈವರೆಗಿನ ಶೋಕಾಕುಲ ಸ್ಥಿತಿಯ ವರ್ಣನೆ ಸೀತೆಯ ಗೃಹಿಣಿಯ ಹೊಣೆಗಳನ್ನು ಮರೆಸಿಲ್ಲ. ಅತ್ತೆಗೆ, ತನ್ನ ಬದುಕಿಗೆ ರಕ್ಷಣೆಯಾಗಿದ್ದ ಲಕ್ಷ್ಮಣನಿಗೆ ಸೀತೆ ಹೇಳುವುದನ್ನೆಲ್ಲ ಹೇಳತೊಡಗಿದ್ದಾಳೆ. ಲಕ್ಷ್ಮಣ ಮಾತನಾಡದೆ ನಿಂತುದನ್ನು ಕಂಡು ಕೊನೆಗೆ ತಾನೇ ಹೇಳುತ್ತಾಳೆ:

ಏಕೆ ನಿಂತಿಹೆ ಪೋಗು ಸೌಮಿತ್ರಿ ಕೋಪಿಸನೆ
ಕಾಕುತ್ಸ್ಥನಿಲ್ಲಿ ತಳುವಿದೊಡೆ ನೆರವುಂಟು ತನ
ಗೀಕಾಡೊಳುಗ್ರಜಂತುಗಳಲ್ಲಿ ರಘುನಾಥನೇಕಾಕಿಯಾಗಿರ್ಪನು ॥

ಮೇಲಿನ ಮೂರು ಸಾಲುಗಳಲ್ಲಿ ಮತ್ತೆ ಮುಂದಿನ ಎಂಟು ಸಾಲುಗಳಲ್ಲಿ ಸೀತೆಯ ಮಾನವೀಯ ಸ್ವಭಾವಗಳನ್ನು ಕವಿ ಸಹಜವಾಗಿ ಚಿತ್ರಿಸಿದ್ದಾನೆ. ಎಷ್ಟೆಲ್ಲ ಜನರು ತನಗೆ ಬೇಕಾದವರು ಇದ್ದೂ ತುಂಬುಗರ್ಭಿಣಿಯಾದ ತಾನು ಪರದೇಶಿಯಾಗಿ ಕಾಡಿನೊಳಗೆ ಅಲೆದಾಡುವ ಸ್ಥಿತಿ ಪ್ರಾಪ್ತವಾದಾಗ ವ್ಯಕ್ತಿ ಹೇಗೆ ನಡೆದುಕೊಳ್ಳಬಹುದು ಎಂಬುದನ್ನು ಗಮನಿಸಿದರೆ ಸೀತೆಯ ಹಿರಿಮೆ ಗೊತ್ತಾಗುತ್ತದೆ. ಅವಳ ಹಿರಿಮೆ ಅಮಾನುಷ ಅಥವಾ ಯಾಂತ್ರಿಕ ಅಲ್ಲ ಎಂಬುದನ್ನು ಖಚಿತಪಡಿಸುವ ಸಂದರ್ಭಗಳೂ ಇಲ್ಲೇ ಇವೆ. ಭರತ ಶತ್ರುಘ್ನ ಲಕ್ಷ್ಮಣಾದಿಗಳು ಆಂಜನೇಯ, ವಿಭೀಷಣ ಮೊದಲಾದವರೆಲ್ಲ ಇದ್ದೂ ಯಾರೂ ತಾನು ಕಾಡುಪಾಲಾಗುವುದನ್ನು ತಡೆಯಲು ಸಾಧ್ಯವಾಗಲಿಲ್ಲವಲ್ಲ ಎನ್ನುವ ವ್ಯಥೆಯಿಂದ ಕೂಡಿದ ಮಾತುಗಳು ಇಲ್ಲಿಯವು. ಈ ಸಂದರ್ಭಗಳು ಚಿತ್ರಿಸುತ್ತಿರುವುದು, ಬದುಕಿನ ಅನುಭವಗಳ ಆಳವನ್ನೇ ಕಾಣದ ಆದರ್ಶದ ಬೊಂಬೆಯನ್ನಲ್ಲ; ನೋವಿನ ಆಳಗಳನ್ನೆಲ್ಲ ಅನುಭವಿಸಿಯೂ ತನ್ನ ಮನಸ್ಸಿನ ಸಮತೆಯನ್ನು ಕಾದುಗೊಳ್ಳುತ್ತಿರುವ ಮಾನಿನಿಯನ್ನು. ನೆನಪು ಮಾಡಿಕೊಂಡು ಮತ್ತೆ ಮತ್ತೆ ಅವಳು ಹೇಳುವ ಮಾತುಗಳಲ್ಲಿ ಅಸ್ವರ ಅಸಹಾಯಕತೆಯನ್ನು ಕುರಿತ ಅಸಹನೆಯಿದೆ. ಆದ್ದರಿಂದಲೇ ಸೀತೆ 'ಆರಿದೊರ್ಡೇಗೈವರಿದು ತನ್ನ ಮರುಳಾಟಂ' ಎಂದು ತನಗೆ ತಾನೇ ಸಮಾಧಾನ ತಂದುಕೊಳ್ಳುತ್ತಾಳೆ. ಸೀತೆಯ ಮಾತು ಮತ್ತು ನಡವಳಿಕೆ ಇಷ್ಟಕ್ಕೇ ಸೀಮಿತವಾಗಿದ್ದರೆ ಅವಳ ವ್ಯಕ್ತಿತ್ವವೇ ಬೇರೆಯಾಗಿಬಿಡುತ್ತಿತ್ತು. ಮುಂದಿನ ಮಾತುಗಳನ್ನು ನೋಡಿ:

'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ. ಕಡು ಪಾತಕಂಗೈದು ಪೆಣ್ಣಾಗಿ ಸಂಭವಿಸಿ + ಇದು + ಒಡಲಂ ಪೊರೆವುದು + ಎನ್ನೊಳ್ + ಅಪರಾಧಮ್ + ಉಂಟು. ಸಾಕು + ಇಲ್ಲಿ + ಇರಲ್ + ಬೇಡ ನೀನು. ನಡೆ. ಪೋಗು. ನಿಲ್ಲದಿರ್. ನಿನಗೆ ಮಾರ್ಗದೊಳ್ + ಆಗಲಿ + ಅಡಿಗಡಿಗೆ ಸುಖಮ್ + ಎಂದು' ಕಂಬನಿಗಳನ್ನು ಮಿಡಿದು ಅತ್ತಳು.

ಈ ಭಾಗದಲ್ಲಿ ಎರಡು ಅಂಶಗಳನ್ನು ಗಮನಿಸಬೇಕು. 'ಕಾಡಿನಲ್ಲಿ ನನ್ನನ್ನು ಬಿಟ್ಟು ಹೋಗುವುದಕ್ಕೆ ನಿನಗಿಂತಲೂ ವಿಭೀಷಣ ಮತ್ತು ಸುಗ್ರೀವರು ಬರಬೇಕಾಗಿತ್ತು ಲಕ್ಷ್ಮಣ' ಎನ್ನುವ ಮಾತು (ಸೀತೆ ಆಡಿದ್ದು) ಜೈಮಿನಿಯಲ್ಲಿ ಬರುತ್ತದೆ. ಇದನ್ನು ಲಕ್ಷ್ಮೀಶ ಸ್ವಲ್ಪ ಮೃದುಗೊಳಿಸಿ ಬದಲಾಯಿಸುತ್ತಾನೆ. ಇದರಿಂದ ಲಕ್ಷ್ಮಣನ ಪಾತ್ರ ನಿಂದನೆಯ ಇಕ್ಕಟ್ಟಿನಿಂದ ಪಾರಾದಂತಾಗಿದೆ.

ಜೈಮಿನಿಯು ಸೀತೆ ರಾಮ ತನ್ನನ್ನು ಬಿಟ್ಟಾಗ ಹೇಳುವ ಮಾತು ಹೀಗಿದೆ:

> ಮನಸಾ ಕರ್ಮಣಾ ವಾಚಾ ನಾಪರಾಧ್ಯಾಮಿ ತಂ ಪತಿಮ್
> ಸದಾ ತಚ್ಚರಣೌ ಚಿತ್ತೇ ಚಿಂತಯಾಮಿ ಮನೋರಮೌ ॥

'ಮನಸ್ಸಿನಲ್ಲಾಗಲಿ, ಕಾರ್ಯದಲ್ಲಾಗಲಿ, ಮಾತಿನಲ್ಲಾಗಲಿ ನಾನು ಪತಿಯ ವಿಷಯದಲ್ಲಿಅಪರಾಧ ಮಾಡುವುದಿಲ್ಲ. ಸದಾ ಪತಿಯ ಚರಣಗಳನ್ನೇ ಧ್ಯಾನಮಾಡುತ್ತೇನೆ' ಎನ್ನುವ ಮಾತುಗಳಲ್ಲಿ ಬರುವ ಸೀತೆಯ ಮನಸ್ಸಿನ ಹದ ದೊಡ್ಡದೇ. ಗಂಡನಿಂದ ತೊಂದರೆಯಾಗಿರಬಹುದು. ಆದರೂ ಗಂಡನ ಬಗ್ಗೆ ಯಾವ ಬಗೆಯ ಅಪರಾಧವನ್ನೂ ಮಾಡುವುದಿಲ್ಲ ಎಂದುಕೊಳ್ಳುವುದು ವ್ಯಕ್ತಿ ಅದರಲ್ಲಿಯೂ ಭಾರತದ ಗೃಹಿಣಿ ಸಾಧಿಸುವ ಸಹನೆ ಮತ್ತು ಕ್ಷಮೆಗಳಿಗೆ ದ್ಯೋತ

ಕವೇ. ಆದರೆ ಲಕ್ಷ್ಮೀಶನ ಸೀತೆ ಇನ್ನಷ್ಟು ಎತ್ತರಕ್ಕೇರುತ್ತಾಳೆ. ಅಪರಾಧವನ್ನೇ ಮಾಡದಿರುವಾಗ ಅಪರಾಧ ಮಾಡುವುದಿಲ್ಲ ಎಂಬ ಭರವಸೆಯ ಅಗತ್ಯ ಬೀಳಲಾರದೆಂದು ಕಾಣುತ್ತದೆ. ಆದ್ದರಿಂದಲೆ ಸೀತೆ ಇಲ್ಲಿ ರಾಮನನ್ನು ತಪ್ಪು ತಿಳಿದುಕೊಳ್ಳುವುದಿಲ್ಲ. ರಾಮ ತನ್ನನ್ನು ಕಾಡಿನಲ್ಲಿ ಬಿಡುವಂತೆ ಮಾಡಿದ್ದರಿಂದ ತನಗೆ ಕಷ್ಟವಾದದ್ದೇನೋ ನಿಜ. ಆದರೆ ಅದಕ್ಕೆ ಕಾರಣ ಯಾರು? ಕೇವಲ ರಾಮನೇನು? ಅಲ್ಲ. ಸೀತೆಯ ಪರಿಪಕ್ವತೆಯಿರುವುದು ಇಲ್ಲಿ. ಅವಳ ದೃಷ್ಟಿ ಸಮಾಜದ ಕಡೆಗೆ ಹೊರಳುತ್ತದೆ. ಹೆಣ್ಣಿಗಿರುವ ಸಂಕೋಚದ ಸ್ಥಿತಿಯತ್ತ ಮನಸ್ಸು ಹೋಗುತ್ತದೆ. ವ್ಯಕ್ತಿಗಿಂತ ಸಮಾಜದ ವ್ಯವಸ್ಥೆಯ ಕಡೆಗೆ ಹೊರಳಿದ ದೃಷ್ಟಿ ತೂಕ ತಪ್ಪುವುದು ಕಡಿಮೆ. ಸೀತೆಯ ಅನುಭವವಾದರೂ ಎಂಥದ್ದು? ಮದುವೆಯಾದ ಸ್ವಲ್ಪದಿನಗಳಲ್ಲೆ ಗಂಡನೊಡನೆ ಕಾಡಿಗೆ ಹೋಗಬೇಕಾಯಿತು. ಕಾಡಿನೊಳಗೆ ರಾವಣನಿಂದ ಅಪಹೃತಳಾಗಿ ರಾಕ್ಷಸರ ಮಧ್ಯೆ ನರಳುತ್ತ ಗಂಡನ ಬರವಿಗಾಗಿ ಕಾದು ಕುಳಿತುಕೊಳ್ಳಬೇಕಾಯಿತು. ಅಲ್ಲಿ ಅವಳು ಪಟ್ಟ ಪಾಡುಗಳಂತೂ ಅಸಂಖ್ಯ. ಇಷ್ಟೆಲ್ಲ ಆಗಿ ಗಂಡ ಬಂದು ರಾಕ್ಷಸರನ್ನು ಕೊಂದು ತನ್ನನ್ನು ಪಾರುಗೊಳಿಸಿದ ಮೇಲೆ ತಾನು ತನ್ನ ಶೀಲದ ಬಗ್ಗೆ ಅಗ್ನಿಪರೀಕ್ಷೆಯನ್ನು ಗೆಲ್ಲಬೇಕಾಯಿತು. ಬೆಂಕಿಯಲ್ಲಿ ಬೆಂದು ಬೆಳ್ದಿಂಗಳೇನೋ ಆದಳು. ಆದರೆ ಹೆಣ್ತನದ ಪಾಡು! ಸೀತೆ ಆಗನಿಂದ ಭಾರತದ ಗೃಹಿಣಿಯ ಅಸಹಾಯಕತೆಯನ್ನು ಅನುಭವಿಸಿದ್ದಳು. ತಾನು ಅಗ್ನಿಪರೀಕ್ಷೆ ಕೊಟ್ಟಂತೆ ರಾಮನೇನೂ ಅಗ್ನಿಪರೀಕ್ಷೆ ಕೊಡಬೇಕಾಗಿ ಬರಲಿಲ್ಲ. ಅಷ್ಟೇ ಅಲ್ಲ ಶೀಲದ ಮಾತು ಪಾತಿವ್ರತ್ಯದ ನಿಯಮ ಇವುಗಳನ್ನು ಸ್ತ್ರೀಗೆ ಮಾತ್ರ ಸೀಮಿತಗೊಳಿಸಿದರು. ಸ್ತ್ರೀಯ ವಿಷಯದಲ್ಲಿ ಬರುವ ಅಪವಾದದ ಮಾತುಗಳಿಗೆ ಅವಳು ಸುಲಭವಾಗಿ ಗುರಿಯಾಗುವ ವಸ್ತು. ಈ ಹಿನ್ನೆಲೆಯಲ್ಲಿ ಸೀತೆಯೇನೂ

ಗಂಡಸನ್ನೂ ಅನುಮಾನಿಸಿ ಎಂದು ಹೇಳಲು ಹೊರಟಿಲ್ಲ. ಅಷ್ಟೇ ಅಲ್ಲ, ಗಂಡಸಿಗೇನಾದರೂ ಕೋಡಿದೆಯೇ ಎಂದೂ ಪ್ರಶ್ನಿಸುತ್ತಿಲ್ಲ. ಅವಳ ದೃಷ್ಟಿ ವಾಸ್ತವವಾಗಿರುವ ಸ್ತ್ರೀಯ ಚಿಂತಾಜನಕ ಅಸಹಾಯಕತೆಯತ್ತ ಮಾತ್ರ ಹೊರಳಿದೆ. ಅಂಥ ಅತ್ಯಂತ ಕನಿಷ್ಠ ಪರಿಸ್ಥಿತಿಯಲ್ಲಿದ್ದಾಗಲೂ ಆಕೆ ಅನ್ಯರನ್ನು ಅದರಲ್ಲೂ ರಾಮನನ್ನು ಬಯ್ಯಲು ಹೋಗುವುದಿಲ್ಲ 'ಕರುಣಾಳು ರಾಘವನಲ್ಲಿ ತಪ್ಪಿಲ್ಲ' ಎಂದು ರಾಮನ ಮೇಲಿರುವ ಭಕ್ತಿಪ್ರೇಮಗಳನ್ನು ದೃಢಪಡಿಸುತ್ತಾಳೆ. ಸಹನೆ ಸಂಯಮಗಳನ್ನು ಮತ್ತು ಅದಕ್ಕೂ ಮಿಗಿಲಾಗಿ ಕ್ಷಮಾಗುಣವನ್ನು ಧರಿಸುತ್ತಾಳೆ. ಈ ಸೀತೆಯ ವ್ಯಕ್ತಿತ್ವ ಜೈಮಿನಿಯದಕ್ಕಿಂತ ಹೆಚ್ಚು ಪಕ್ವವಾದದ್ದು. ಇದು ಲಕ್ಷ್ಮೀಶನ ಸಿದ್ಧಿ. 'ಹೆಣ್ಣಾಗಿ ಸಂಭವಿಸಿರುವ ಈ ಒಡಲನ್ನು ಹೊತ್ತಿರುವ ಅಪರಾಧ ನನ್ನದು' ಎನ್ನುವ ಅವಳ ಮಾತು ಇಡೀ ಭಾರತದ ಮಹಿಳೆಯರ ಪರವಾಗಿ ಹೇಳಿದ ಮಾತು. ತಪ್ಪು ಮಾಡದಿದ್ದರೂ ದಂಡನೆಯಾದಾಗ ಸಹಿಸಿ ಕೂರಬೇಕಾದ ಸ್ಥಿತಿ. 'ಅತ್ತೆಮಾವಗಂಜಿ ಸುತ್ತೇಳು ನೆರೆಗಂಜಿ ಬದುಕವ್ವ' ಎಂದ ಗರತಿಯರ ಹಾಡಿನ ಪ್ರಭಾವ ಲಕ್ಷ್ಮೀಶನ ಪ್ರತಿಭೆಯ ಮೇಲೆ ಅಷ್ಟಿಷ್ಟು ಆಗಿರಬೇಕು.

ಮುಂದೆ ಲಕ್ಷ್ಮಣ ಸೀತೆಯನ್ನು ಕಾಪಾಡಿರಿ ಎಂದು ವನದೇವತೆಯರಿಗೆ ಸೂರ್ಯ ಮೊದಲಾದವರಿಗೆ ಮೊರೆಯಿಟ್ಟು ಹೊರಡಲನುವಾಗುತ್ತಾನೆ, ಇಲ್ಲಿಂದ ಮುಂದೆ ಲಕ್ಷ್ಮಣನ ಪಾತ್ರದ ಕೆಲವು ಮುಖಗಳು ಚಿತ್ರಿತವಾಗತೊಡಗುತ್ತವೆ.

ದುಃಖಿತಪ್ತಳಾಗಿ ಹುಡಿಯಲ್ಲಿ ಹೊರಳಾಡುತ್ತಿರುವ ಸೀತೆಯನು ನೋಡಿ ಆತ 'ತೂಗುಯ್ಯಲೆವೊಲಾದನು,' ಸೀತೆಯನ್ನು ಅವನು ಬಿಟ್ಟು ಹೊರಟದ್ದು ಹೇಗೆ? ತಾಯನ್ನು ಬಿಟ್ಟು ನಿಧಾನ

ವಾಗಿ ಎಳೆಗರು ಬೇರೆಯಾಗಿ ಹೋದಹಾಗೆ. ತಾಯನ್ನು ಬಿಟ್ಟು ಎಳೆ ಕರು ಹೋಗಬೇಕಾದರೆ ಯಾರಾದರೂ ಅದನ್ನು ಪ್ರಯತ್ನ ಪೂರ್ವಕವಾಗಿ ಎಳೆಯಬೇಕು. ಅಷ್ಟು ಎಳೆದರೂ ಕರು ಪ್ರತಿ ಭಟಿಸಿ ಪ್ರತಿಭಟಿಸಿ ನಿಧಾನವಾಗಿ ದೂರವಾಗುತ್ತದೆ, ಈ ಚಿತ್ರ ದಲ್ಲಿ ಲಕ್ಷ್ಮಣ ಮತ್ತು ಸೀತೆಯರ ಸಂಬಂಧ ಸೊಗಸಾಗಿದೆ. ಎಳೆಗರು ಮತ್ತು ತಾಯಿ ಎಂಬ ಪ್ರಾಣಿರೂಪಕಗಳಲ್ಲಿ ವಾತ್ಸಲ್ಯದ ಭಾವ ತೀವ್ರವಾಗುತ್ತದೆ.

ಮುಂದೆ ಸೀತೆ ಶೋಕಿಸುತ್ತಾ ಇರುವಾಗ ಪ್ರಾಣಿಗಳು ಬಂದು ಸಂತೈಸುತ್ತವೆ; ಉಪಚರಿಸುತ್ತವೆ. ಸ್ವಲ್ಪಹೊತ್ತಿನಲ್ಲಿ ತನ್ನ ಶಿಷ್ಯ ರೊಡನೆ ಕಾಡನ್ನು ಪ್ರವೇಶಿಸಿದ್ದ ವಾಲ್ಮೀಕಿ ಮಹರ್ಷಿಯ ಆಗಮನವಾಗುತ್ತದೆ. ಆಗ ಸೀತೆ 'ಪಾಡಳಿದು ಗ್ರೀಷ್ಮಋತುವಿಂ ನ್ನವೆದ ಕಾಂತಾರದಧಿದೇವಿ ತಾನೆನಲ್' ಇದ್ದುದನ್ನು ಲಕ್ಷ್ಮೀಶ ಚಿತ್ರಿಸಿದ್ದಾನೆ. ಈ ಉಪಮೆ ಮತ್ತೆ ಲಕ್ಷ್ಮೀಶನದೇ. ಜೈಮಿನಿ 'ಗ್ರೀಷ್ಮದ ನವಿಲಿನ ಚಿತ್ರ' ವನ್ನು ಹೋಲಿಕೆಗೆ ಕೊಟ್ಟಿದ್ದರೆ ಲಕ್ಷ್ಮೀಶ ಅದಕ್ಕಿಂತಲೂ ಸುಂದರವಾದ ಮತ್ತು ಅರ್ಥಪೂರ್ಣವಾದ ಚಿತ್ರ ವನ್ನು ಕೊಟ್ಟಿದ್ದಾನೆ. ಸೀತೆಯ ವ್ಯಕ್ತಿತ್ವವನ್ನು ಮೂಡಿಸಲು. ಮುಂದೆ ಸೀತೆ ವಾಲ್ಮೀಕಿ ಋಷಿಗಳಾಶ್ರಮಕ್ಕೆ ತೆರಳಿ ಅಲ್ಲಿ ಅವಳಿ ಮಕ್ಕಳನ್ನು ಹಡೆಯುತ್ತಾಳೆ. ವಾಲ್ಮೀಕಿ ಮಹರ್ಷಿಗಳು ಅವರಿಗೆ ಲವಕುಶರೆಂದು ನಾಮಕರಣಮಾಡಿ ಅನಂತರ ವಿದ್ಯಾಭ್ಯಾಸ ಮಾಡಿಸುತ್ತಾರೆ. ಮುಂದೆ ರಾಮನ ಅಶ್ವಮೇಧದ ಕುದುರೆ ಬಂದಾಗ ಲವಕುಶರು ಅದನ್ನು ಕಟ್ಟಿ ರಾಮನನ್ನು ಸೋಲಿ ಸುತ್ತಾರೆ. ವಾಲ್ಮೀಕಿಯ ಮಧ್ಯಸ್ಥಿಕೆ ಹಾಗೂ ಆಶೀರ್ವಾದ ಗಳಿಂದ ಸೀತಾಪರಿಗ್ರಹವೂ ನಡೆಯುತ್ತದೆ. ಈ ಕಥೆಯನ್ನು ಇಷ್ಟು ಸಂಕ್ಷೇಪವಾಗಿ ನಾನು ಹೇಳಿ ಮುಗಿಸುವುದಕ್ಕೆ ಉದ್ದೇಶ ವಿದೆ. ಲಕ್ಷ್ಮೀಶ ಈ ಕಥೆಯ ಚಿತ್ರಣ ವಿಷಯದಲ್ಲಿಯೂ ಸ್ವಲ್ಪ

ಮಟ್ಟಿಗೆ ಸಂಗ್ರಹ ಗುಣವನ್ನು ಮೆರೆದಿದ್ದಾನೆ ಎಂದು ಒಪ್ಪಿಕೊಳ್ಳ ಬಹುದಾದರೂ ಸೀತಾಪರಿತ್ಯಾಗ ಸಂದರ್ಭದಲ್ಲಿ ಪ್ರಕಟವಾಗಿರು ವಂತೆ ಈತನ ಪ್ರತಿಭೆ ಇಲ್ಲಿ ಎಚ್ಚತ್ತಿಲ್ಲ, ಸೀತಾವನವಾಸವನ್ನು ಕುರಿತ ವಿಮರ್ಶೆಯಲ್ಲಿ ಶ್ರೀ ಕುವೆಂಪು ಅವರು ವಿವರಿಸಿ ಹೇಳು ವಂತೆ ರಾಮ ಮತ್ತು ಲವಕುಶರ ಕಾಳಗದ ಕಥೆ ಹಾಸ್ಯಾಸ್ಪದ ವಿಸಂಗತಿಯಾಗಿದೆ. ಸೀತಾಪರಿತ್ಯಾಗ ಸಂದರ್ಭದಲ್ಲಿ ಇದ್ದಂತೆ ಇಲ್ಲಿಯೂ ಲಕ್ಷ್ಮೀಶನು ಸ್ವಾತಂತ್ರ್ಯ ವಹಿಸಿದ್ದರೆ ಮಕ್ಕಳೆಂದು ಗೊತ್ತಾದಮೇಲೂ ಯುದ್ಧಮಾಡುವ ರಾಮನ ವರ್ತನೆಯನ್ನು ನಿವಾರಿಸಲು ಸಾಧ್ಯವಾಗಿದ್ದರೆ ಅಥವಾ ಅವರಿಗೆ ತಂದೆಮಕ್ಕ ಳೆಂಬ ಬಾಂಧವ್ಯ ತಿಳಿಯದಂತೆಯೇ ಕಥೆಯನ್ನು ನಿರ್ವಹಿಸಿದ್ದರೆ ಈ ಕಥಾಭಾಗದ ಬೆಲೆಯೇ ಬೇರೆಯಾಗುತ್ತಿತ್ತು. ಏನಾದರಾಗಲಿ ಸೀತಾಪರಿತ್ಯಾಗದ ಪ್ರಸಂಗವನ್ನು ನೋಡಿದಾಗ ಲಕ್ಷ್ಮೀಶನು ಜೈಮಿನಿಗಿಂತ ಉನ್ನತವಾದುದನ್ನು ಸಾಧಿಸಿದ್ದಾನೆ. ಒಂದನೆಯ ಸಾಧನೆ ಈತನ ಸಂಗ್ರಹಗುಣ. ಇದರಿಂದ ಕಥೆಗೆ ವೇಗ ಪ್ರಾಪ್ತ ವಾಗಿದೆ. ಎರಡನೆಯದು ಕುತೂಹಲವನ್ನರಳಿಸುತ್ತ ಕಥೆ ಹೇಳು ವುದು. ಮೂರನೆಯದು ರಾಮ ಸೀತೆ ಮತ್ತು ಲಕ್ಷ್ಮಣರ ಪಾತ್ರಗಳನ್ನು ಕಾಂತಿಪೂರ್ಣವಾಗಿ ಚಿತ್ರಿಸಿರುವುದು.

ಕಥನ ಕಲೆಯ ದೃಷ್ಟಿಯಿಂದ ನೋಡಿದರೆ ಸೀತಾಪರಿತ್ಯಾಗದ ಕಥೆಯು ಮೊದಲಲ್ಲಿ ಬರುವ ರಾಮಾಯಣದ ಸಂಕ್ಷೇಪ ಕಥಾ ಭಾಗವನ್ನು ಬಿಟ್ಟರೆ ಸುಮಾರು ಎಂಬತ್ತೆರಡು ಪದ್ಯಗಳಲ್ಲಿ ಒಟ್ಟು ಹತ್ತಿಪ್ಪತ್ತು ಸಾಲುಗಳನ್ನು ಅಲ್ಲಿ ಇಲ್ಲಿ ತೆಗೆದುಹಾಕಲು ಸಾಧ್ಯ ವಾಗಬಹುದೋ ಏನೋ! ಅಷ್ಟೊಂದು ಬಿಗಿಯಿಂದ ಕೂಡಿದ ರಸಾವೇಶದ ರಚನೆ ಲಕ್ಷ್ಮೀಶನದು. ಮೂಲಕ್ಕಿಂತ ಇಲ್ಲಿ ಕಥನ ಸ್ವಾರಸ್ಯ ಹೆಚ್ಚಾಗಿದೆ. ರಾಮ, ಸೀತೆ, ಭರತ, ಕೊನೆಗೆ ದೂತ ಈ ಎಲ್ಲ ಪಾತ್ರಗಳ ಚಿತ್ರಣದಲ್ಲಿಯೂ ಲಕ್ಷ್ಮೀಶ ತನ್ನ ಕೌಶಲ

ವನ್ನು ಮೆರೆದಿದ್ದಾನೆ. ಲಕ್ಷ್ಮಣನ ಪಾತ್ರ ಸೋತಿಲ್ಲ. ರಾಮ ಮತ್ತು ಸೀತೆಯರ ಪಾತ್ರಗಳು ಹೊಸಕಾಂತಿಯನ್ನೆ ಪಡೆದುಕೊಂಡಿವೆ. ಪಾತ್ರ ಚಿತ್ರಣದಲ್ಲೂ ಲಕ್ಷ್ಮೀಶ ಜೈಮಿನಿಗಿಂತ ಒಂದು ಹೆಜ್ಜೆ ಮುಂದಿಟ್ಟಿದ್ದಾನೆ. 'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆಗೊರಗುವಂತೆ' 'ಪಾಡಳಿದು ಗ್ರೀಷ್ಮಋತುವಿನ್ನವೆದ ಕಾಂತಾರದಧಿದೇವಿ ತಾನೆನಲ್' ಇಂಥ ಸ್ವತಂತ್ರವಾದ ಪಾತ್ರ ಗಳ ಮೌಲ್ಯವನ್ನು ಹರಳುಗಟ್ಟಿಸುವ ಶಕ್ತ ಉಪಮೆಗಳನ್ನು ಬಳ ಸಿದ್ದಾನೆ.

ಸೀತಾ ವನವಾಸದ ಕಥೆಯನ್ನು ಎರಡು ಭಾಗವಾಗಿ ಮಾಡಿ ದರೆ ಸೀತಾಪರಿತ್ಯಾಗದ ಕಥೆಯಲ್ಲಿ ಲಕ್ಷ್ಮೀಶ ಮಹಾಕವಿಯಂತೆ ಮೆರೆಯುತ್ತಾನೆ. ಆದರೆ ಸೀತಾಪರಿಗ್ರಹ ಮತ್ತು ರಾಮ–ಲವ ಕುಶರ ಕಾಳಗದ ಸಂದರ್ಭದಲ್ಲಿ ಅತ್ಯಂತ ಸಾಮಾನ್ಯನಾಗಿಬಿಡು ತ್ತಾನೆ. ಲಕ್ಷ್ಮೀಶನ ಕೃತಿಯ ಈ ಉಪಾಖ್ಯಾನವನ್ನು ವಿವರ ವಾಗಿ ನೋಡಿದರೆ ಲಕ್ಷ್ಮೀಶ ಕೇವಲ ಅನುವಾದಕಾರನಾಗಿ ಉಳಿ ದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಈತ ಸ್ವತಂತ್ರ ಪ್ರತಿಭೆಯಿಂದ ಕೂಡಿದ ಬಹುದೊಡ್ಡ ಕವಿಯಾಗಿದ್ದಾನೆ ಅನ್ನಿಸುತ್ತದೆ. ಸುದೀರ್ಘ ವಾಗಿರುವ ಚಂದ್ರಹಾಸನ ಉಪಾಖ್ಯಾನವಾಗಲಿ, ಸುಧನ್ವರ ಕಥೆ ಯಾಗಲಿ ಇದೇ ರೀತಿಯ ಕಲೆಗಾರಿಕೆಯಿಂದ ಮೆರೆಯುತ್ತವೆ. ಚಂಡಿಯ ಕಥೆಯಲ್ಲಿಯೂ ಅಷ್ಟೆ. ಚಂಡಿಯ ಕಥೆಯನ್ನು ಈತ ಸ್ವಾರಸ್ಯಮಯವಾಗುವಂತೆ ಸಂಗ್ರಹಿಸಿದ್ದಾನೆ. ಚಂಡಿಯನ್ನು ಮದು ವೆಯಾಗಿ ಪೇಚಿಗೆ ಸಿಕ್ಕಿಬಿದ್ದ ಗಂಡ ಉದ್ದಾಲಕನ ಸ್ಥಿತಿಯನ್ನು ಹೇಳುವ ಮಾತುಗಳನ್ನು ನೋಡಿ: 'ಅಳ್ಳೆಯೊಳ್ ಕೋಲ್ಗೊಂಡ ತೆರದೊಳ್' 'ಮುಳ್ಳಿಡಿದ ಮರನೇರಿದಂತಾದುದು.' ಮುಳ್ಳು ಹಿಡಿದ ಮರವನ್ನು ಹತ್ತಿದಂತೆ, ಹೊಟ್ಟೆಯಲ್ಲಿ ಬಾಣ ನಾಟಿ ಕೊಂಡಂತೆ ಎರಡೂ ಮಾತುಗಳೂ ಹಟಮಾರಿ ಹೆಂಡತಿಯ

ಜೊತೆಗೆ ಬದುಕುತ್ತಿರುವ ಆ ಮುಗ್ಧ ಉದ್ದಾಲಕ ಋಷಿಯ ಪ್ರಾಣ ಸಂಕಟದ ಸ್ಥಿತಿಯ ಸ್ವಾರಸ್ಯ ಕಣ್ಣಿಗೆ ಕಟ್ಟುವಂತೆ ಮಾಡುತ್ತವೆ. ಈ ಎರಡು ಉಪಮೆಗಳೂ ಲಕ್ಷ್ಮೀಶನವೇ.

ಲಕ್ಷ್ಮೀಶನು ಬರೆದಿರುವ ಕೃತಿ 'ಕನ್ನಡ ಜೈಮಿನಿ ಭಾರತ' ಅಥವಾ 'ಜೈಮಿನಿ ಭಾರತ' ವೆಂದೇನೊ ಕನ್ನಡದಲ್ಲಿ ಬಳಕೆಗೆ ಬಂದು ಬಿಟ್ಟಿದೆ. ಆದರೆ ಲಕ್ಷ್ಮೀಶ ಜೈಮಿನಿಯನ್ನು ಕನ್ನಡಕ್ಕೆ ಮಕ್ಕಿ-ಕ-ಮಕ್ಕಿಯಾಗಿ ಅನುವಾದಿಸಿದವನಾಗಿಲ್ಲ. ಜೈಮಿನಿಯ ಕಥೆಯನ್ನು ಎಷ್ಟೋ ಕಡೆ ಹೊಸದಾಗಿ ಕಂಡರಿಸಿದವನಾಗಿದ್ದಾನೆ. ಹೀಗಾಗಿ ಲಕ್ಷ್ಮೀಶಕವಿಯು ಕಾದಂಬರಿಯನ್ನು ಪುನರ್ನಿರ್ಮಿಸಿದ ನಾಗವರ್ಮ ಹಾಗೂ ಯಶೋಧರ ಚರಿತ್ರೆಯನ್ನು ಪುನಸ್ಸೃಷ್ಟಿಸಿದ ಜನ್ನ ಇವರಿಬ್ಬರ ಪರಂಪರೆಗೆ ಸೇರುತ್ತಾನೆ. ಸ್ವತಂತ್ರ ಕವಿಯೆಂಬ ಗೌರವಕ್ಕೆ ಭಾಜನನಾಗುತ್ತಾನೆ.

ಕೆಲವು ಪದ್ಯಗಳ ಉದಾಹರಣೆಗಳು :

ಸೀತಾಪರಿತ್ಯಾಗದ ಪೂರ್ಣಭಾಗವನ್ನೇ ಹಾಗೂ ವಿಶದವಾಗಿಯೆ ನೋಡಿರುವುದರಿಂದ ಲಕ್ಷ್ಮೀಶನ ಬರವಣಿಗೆಯ ಒಂದು ಒಳ್ಳೆಯ ಮಾದರಿಯನ್ನೇ ನೋಡಿದಂತಾಗಿದೆ. ಆದರೂ ಸೀತಾ ಪರಿತ್ಯಾಗದ ಭಾಗ ಕೇವಲ ಕರುಣರಸದ ಭಾಗವಾದ್ದರಿಂದ ಬೇರೆ ಬೇರೆ ಭಾವಗಳನ್ನು ಹಾಗೂ ಸಂಭಾಷಣೆಗಳನ್ನು ಈತ ಹೇಗೆ ತಂದಿದ್ದಾನೆ ಎನ್ನುವುದಕ್ಕೆ ಈ ಕೆಲವು ಉದಾಹರಣೆಗಳನ್ನು ನೋಡಬಹುದು.

ಚಂಡಿ ಮತ್ತು ಅಂಥವಳನ್ನು ಕಟ್ಟಿಕೊಂಡ ಮುಗ್ಧ ಋಷಿಯ ಚಿತ್ರ:

ಎಳ್ಳನಿತು ನಿನ್ನ ಮಾತಂ ಕೇಳ್ವಳೆಂದೆಣಿಕೆ
ಗೊಳ್ಳದಿರ್ ಪರಿಚರ್ಯೆ ಮನೆವಾರ್ತೆಯೆಂದೆಂಬ

ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿ ಪ್ಪೋರೆ ॥
ಮುಳ್ಳಿಡಿದ ಮರನೇರಿದಂತಾದುದಿಹಪರಕಿ
ದೊಳ್ಳಿತಾದಪ್ಪುದೆ ಬಂದುದು ತಪೋಹಾನಿಯೆಂ
ದಳ್ಳೆಯೊಳ್ ಕೋಲ್ಗೊಂಡ ತೆರದೊಳುದ್ದಾಲಕಂ ಚಿಂತಿಪಂ ಪ್ರತಿ
ದಿನದೊಳು ॥

ಬಜಾರಿಯ ಸ್ವಭಾವ ಮತ್ತು ಅವಳ ಕೈಯಲ್ಲಿ ಸಿಕ್ಕ ಮುಗ್ಧನಾದ ಗಂಡನ ಚಿತ್ರ ಮೇಲಿನ ಪದ್ಯದಲ್ಲಿರುವುದು.

ಶ್ರೀ ಕೃಷ್ಣಭಕ್ತ ಸುಧನ್ವ ತಂದೆಯ ಆಜ್ಞೆಯಂತೆ ಕುದಿವ ಎಣ್ಣೆಯ ಕೊಪ್ಪರಿಗೆಗೆ ಬಿದ್ದ ಸಂದರ್ಭ ಹೀಗೆ ಮೂಡಿದೆ:

ಭೋಯೆಂದುದಖಿಳ ಪರಿವಾರಮಡಿಗಡಿಗೆ ಹಾ
ಹಾಯೆಂದು ಮರುಗಿದುದು ನೀನಿಂತಳಿವರೆ ತಾ
ತಾಯೆಂದು ಪೊರಳ್ದುದೊಡೆತನಕೆ ಬೇಸತ್ತು ಸತ್ತಾಯೆಂದು
ಸೈಗೆಡೆದುದು ॥
ವಾಯಕಿಂತಕಟ ಸುಕುಮಾರನಂ ಕೊಂದನೀ
ರಾಯನರಿವಂ ನೆರೆ ಸುಡಲಿ ಶಂಖಲಿಖಿತರೆಂ
ಬೀ ಯಮೋಪಮರೇಕೆ ಜನಿಸಿದರೊ ಭೂಸುರರೊಳೆಂದು ಮೊರೆ
ಯಿಡುತಿರ್ದುದು ॥

ಹಿಂದೆ ಪ್ರಹ್ಲಾದನಂ ಪಾಲಿಸಿದೆ ಗಡ ದ್ರುಪದ
ನಂದನೆಯ ಮಾನಮಂ ಕಾದೆ ಗಡ ಭಕ್ತರ್ಗೆ
ಬಂದೆಡರನಾವಗಂ ಪರಿಹರಿಪೆ ಗಡ ದೇವ ನಿನ್ನಂ ಪೆಸರ್ಗೊಂಡೊಡೆ ॥
ಇಂದುಮೊರೆವೊಗುವೊಡಾರಂ ಕಾಣೆನಕಟ ಗೋ
ವಿಂದ ನೀನಲ್ಲದೆ ವಿಚಾರಿಸುವರಿಲ್ಲ ಸಲ
ಹೆಂದವಂ ಚಿತ್ತದೊಳ್ ಕೃಷ್ಣನಂ ಧ್ಯಾನಿಸುತೆ ನಿರ್ಭಯದೊಳಿರು
ತಿರ್ದನು ॥

ಜಯಜಯ ಜನಾರ್ದನ ಮುಕುಂದ ಮುರಮರ್ದನ ವಿ
ಜಯಮಿತ್ರ ಗೋವಿಂದ ಪಕ್ಷಿವಾಹನ ಕಮಲ

ನಯನ ಪೀತಾಂಬರ ಘನಶ್ಯಾಮ ಹರಿಕೃಷ್ಣ ವೈಕುಂಠನಾರಾಯಣ ॥
ಕ್ಷಯರಹಿತ ರಾಮ ಲಕ್ಷ್ಮೀರಮಣ ನತಸುರಾ
ಲಯಧೇನು ಭಕ್ತವತ್ಸಲ ಕೃಪಾಕರ ಮಹಾ
ಭಯನಿವಾರಣ ನೃಸಿಂಹ ತ್ರಾಹಿಯೆನುತಿರ್ದನಾ ಸುಧನ್ವಂ ಮರೆಯದೆ॥

ಅರಸಕೇಳಾಶ್ಚರ್ಯಮಂ ನೋಡಲೆವೆ ಸೀವೊ
ಲುರಿಗೊಂಡು ಕಡುಗಾಯ್ದು ತಳಪಳದೆ ಕುದಿದುಕ್ಕಿ
ಮೊರೆವುರುಕಟಾಹ ತೈಲಂ ಮೈಗೆ ಸೊಗಯಿಸುವ ಬಾವನ್ನದಣ್ಪಾಗಿರೆ॥
ಕರಗದಾತನ ರೋಮವಡಗದಂಗದ ಸೊಂಪು
ಕೊರಳ ತುಳಸಿಯ ದಂಡೆ ಬಾಡದು ಮುಡಿದ ಪೂಗ
ಳರೆಗಂದವರಳ್ವುದು ಸುಧನ್ವನ ಮುಖಾಂಬುಜಮಿನೋದಯದ
ಕಮಲದಂತೆ ॥

ಅದ್ಭುತರಸ ಪ್ರಧಾನವಾದ ಈ ಭಾಗವಾದ ಮೇಲೆ ಹಾಸ್ಯ ರಸದಿಂದ ಕೂಡಿರುವ ಒಂದು ಪದ್ಯವನ್ನು ನೋಡಬಹುದು. ಅರ್ಜುನನ ರಥದ ಪತಾಕೆಯಲ್ಲಿರುವ ಆಂಜನೇಯನನ್ನು ಕಂಡು ರಕ್ಕಸಿಯರು ಅಂಜಿದ ಚಿತ್ರ ಇಲ್ಲಿಯದು:

ಆ ರಾಕ್ಷಸಿಯರೊಳೊರ್ವಳ್ ಧನಂಜಯನ ಪೊಂ
ದೇರ ಪಳವಿಗೆದುದಿಯ ಹನುಮಂತನಂ ಕಂಡು
ದೂರಕೋಡಿದಳಂದು ಲಂಕಿಣಿಯನೊದೆದ ಕೋಡಗಮೆಂದು
ಮತ್ತೋರ್ವಳು ॥
ಊರಂ ಸುಡುವುದೆಂದು ತನ್ನ ಸದನದ ಸರಕ
ನಾರೈವುದಕ್ಕೆ ಪೋದಳ್ ದನುಜೆ ಮತ್ತೋರ್ವ
ಳೋರಂತೆನಸಿಕೊಂಡಳೀ ಕಪಿ ನೆರಳ್ಗೆ ಸೈರಿಸದೆಂದು ಸೈವರಿದಳು ॥

ಇಂಥ ಅನೇಕ ಚೆಲುವಾದ ಪದ್ಯಗಳನ್ನು ಕಾವ್ಯದ ತುಂಬ ನೋಡಬಹುದು. ವಿಸ್ತಾರ ಭಯದಿಂದ ಈ ಪಟ್ಟಿಯನ್ನು ಬೆಳೆಸದೆ ದುಷ್ಟಬುದ್ಧಿ ತಾನು ಮಾಡಿದ ಮೋಸದ ಉಪಾಯಗಳೆಲ್ಲ

ನಿಷ್ಫಲವಾಗಿ ಚಂದ್ರಹಾಸ ಉದ್ಧಾರವಾದುದೇ ಅಲ್ಲದೆ ತನ್ನ ಮಗನೇ ಸತ್ತಾಗ ಹೇಗೆ ವರ್ತಿಸಿದನೆಂಬುದನ್ನು ವರ್ಣಿಸುತ್ತದೆ ಈ ಪದ್ಯ.

ಕಂಬನಿಗಳರುಣಾಂಬುವಂ ತೊಳೆಯೆ ಮುಂಡಾಡಿ
ಪಂಬಲಿಸಿ ಹಲುಬಿದಂ ಮರುಗಿ ತನ್ನಿಂದಳಿದ
ನೆಂಬಳಲ್ ಮಿಗೆ ಮಂತ್ರಿ ಸೈರಿಸದೆ ಕೆಲಬಲದ ಕಂಬಗಳಂ ಪಾಯಲು ॥
ಕುಂಬಳದ ಕಾಯಂತೆ ಚಿಪ್ಪಾಗಿ ನಿಜಮಸ್ತ
ಕಂ ಬಿರಿದು ಬಿದ್ದನುರ್ವಿಗೆ ಪೋದುದಸುಕಾಯ
ದಿಂ ಬಳಿಕ ನಂದಿದ ಸೊಡರ್ಗಳೆನೆ ಮೃತರಾಗಿ ಸುತತಾತರಿರುತಿರ್ದರು.

ಇಂಥ ಚೆಲುವಾದ ಬರವಣಿಗೆಯನ್ನು ಕೇವಲ ಅನುವಾದ ವೆನ್ನುವುದೇ ಕವಿಗೆ ಮಾಡಿದ ದೊಡ್ಡ ಅಪಚಾರವಾಗುತ್ತದೆ. ಲಕ್ಷ್ಮೀಶನದು ಸಹಜ ಕವಿತಾ ಶಕ್ತಿ, ಮೂಲಕಥೆಯೊಂದನ್ನು ಆ ಪ್ರತಿಭೆ ನೆಮ್ಮಿಕೊಂಡಿದೆ ಅಷ್ಟೆ. ವರ್ಣನೆಗಳಾಗಲಿ, ಪಾತ್ರಚಿತ್ರಣ ವಾಗಲಿ, ಕಥಾನಿರೂಪಣೆಯಾಗಲಿ ಇದೇ ರೀತಿಯ ಕೌಶಲ ಇವನದು.

## ಉಪಮಾಲೋಲ ಲಕ್ಷ್ಮೀಶ

ಲಕ್ಷ್ಮೀಶನ ಪ್ರತಿಭೆ ಬಹುಮುಖವಾದುದು. ಈತನ ಉಪಮೆ ಗಳ ಸೊಗಸು ಅಪೂರ್ವವಾದುದು. ಜೈಮಿನಿಯಲ್ಲಿ ಬರುವ ಸೊಗಸಾದ ಉಪಮೆಗಳನ್ನೇ ಅಲ್ಲದೆ ತನ್ನವೇ ಆದ ಸ್ವತಂತ್ರ ಸುಂದರ ಉಪಮೆಗಳನ್ನೂ ಈತ ಬಳಸಿದ್ದಾನೆ. ಇವನು ಬಳಸುವ ಉಪಮೆಗಳಲ್ಲಿ ಕಾವ್ಯದ ಸೌಂದರ್ಯವಿದೆ. ಇವು ಈತನು ವರ್ಣಿಸುವ ಸನ್ನಿವೇಶಗಳಿಗೆ ಅಥವಾ ವ್ಯಕ್ತಿತ್ವಗಳಿಗೆ ಕನ್ನಡಿ ಹಿಡಿಯುವಂತಿವೆ:

'ಜೀವಮಂ ಕೊಂಡೊಯ್ವ ಕಾಲನಂ ಪೆಣನಟ್ಟುವಂತಾಯ್ತುಲಾ
ನಿಮ್ಮ ಸಾಹಸಂ'
'ತಲೆಬಲ್ಲಿತೆಂದು ಕಲ್ಲಂ ಪಾಯ್ವಲಾ'
'ತೊಳಲುತರಸುವ ಬಳ್ಳಿ ಕಾಲ್ತೊಡಕಿದಂತೆ'
'ಮುಳ್ಳಿಡಿದ ಮರನೇರಿದಂತಾದುದು'
'ಅಳ್ಳೆಯೊಳ್‌ಕೋಲ್ಗೊಂಡ ತೆರದೊಳ್'
'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತಕದಳಿ ಮುರಿದಿಳೆ
ಗೊರಗುವಂತೆ'
'ಗ್ರೀಷ್ಮ ಋತುವಿನ್ನವೆದ ಕಾಂತಾರದಧಿದೇವಿ ತಾನೆನಲ್'
ಇಂಥ ಹಲವಾರು ಸ್ವತಂತ್ರೋಪಮೆಗಳಲ್ಲಿ
'ನವ ವರನಂತೆ'
'ಬಲಿಯಧ್ವರಕೆ ವಾಮನಂ ಬಂದಂತೆ'
'ತಾಯನೆಳಗರು ಬಿಚ್ಚುವಂತೆ'
'ಮಮತೆಯಂ ಮಹಾಯೋಗಿ ಬಿಡುವಂತೆ'
'ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ'

ಇಂಥ ಜೈಮಿನಿಯಿಂದ ಅನುವಾದಿಸಿದ ಉಪಮೆಗಳಲ್ಲಿ, ಮತ್ತು ಅವುಗಳ ಬಳಕೆಯಲ್ಲಿ ಲಕ್ಷ್ಮೀಶ ಅಪೂರ್ವವಾದ ಔಚಿತ್ಯವನ್ನು ಮೆರೆದಿದ್ದಾನೆ. (ಸೀತಾವನವಾಸ ಪ್ರಸಂಗದ ನಿರೂಪಣೆಯ ಸಂದರ್ಭದಲ್ಲಿ ಇಂಥ ಉಪಮೆಗಳ ಸೊಗಸನ್ನು ಆಗಲೇ ವಿವರಿಸಲಾಗಿದೆ). ಈತನ ಲೋಕಾನುಭವ ಈ ಉಪಮಾನಗಳಲ್ಲಿ ಬಹು ಸ್ಪಷ್ಟವಾಗಿದೆ. ಈತನ ಉಪಮೆಗಳ ಸೊಗಸು ಅನೇಕರ ಮನಸ್ಸನ್ನು ಸೆಳೆದಿದೆ. ಹೀಗಾಗಿ ಲಕ್ಷ್ಮೀಶ ಉಪಮಾಲೋಲನೆಂದೂ ಪ್ರಶಂಸಿಸಲ್ಪಟ್ಟಿದ್ದಾನೆ. ಇಷ್ಟಾಗಿಯೂ ಮೂಲದ ಇನ್ನು ಹಲವಾರು ಸೊಗಸಾದ ಉಪಮಾನಗಳನ್ನು ಈತ ಬಳಸಿಕೊಂಡಿಲ್ಲದಿರುವುದು ಮಾತ್ರ ಅಚ್ಚರಿಯ ವಿಷಯವಾಗಿದೆ. ಕೆಲವೊಮ್ಮೆ

ಈತ ಮೂಲದ ಉಪಮೆಗೆ ಹೆಚ್ಚಿನ ಅರ್ಥ ತುಂಬಿ ಅವುಗಳನ್ನು ತಾನು ಬಳಸುವ ಸಂದರ್ಭಗಳಲ್ಲಿ ಅತ್ಯಂತ ಶಕ್ತಿಯುತವಾಗಿ ಮಾಡಿಕೊಂಡಿರುವುದೂ ಉಂಟು. 'ಬಿರುಗಾಳಿ ಪೊಡೆಯಲ್ಕೆ ಫಲಿತ ಕದಳಿ ...' ಉಪಮೆ ಈ ರೀತಿಯದು. ಮೂಲದಲ್ಲಿ 'ಫಲಿತ' ಎಂಬುದು ಇಲ್ಲ. ಲಕ್ಷ್ಮೀಶ 'ಫಲಿತ' ಎಂಬುದನ್ನು ಸೇರಿಸಿ ಈ ಉಪಮೆಯನ್ನೇ ತನ್ನದಾಗಿಸಿಕೊಂಡುಬಿಟ್ಟಿದ್ದಾನೆ.

## ನಾದಲೋಲ ಲಕ್ಷ್ಮೀಶ

ಲಕ್ಷ್ಮೀಶನ ಪ್ರತಿಭೆಯನ್ನು ಕೊಂಡಾಡುವಾಗ ಕೆಲವರು ಆತನನ್ನು ನಾದಲೋಲ ಎನ್ನುವುದುಂಟು. ಈ ಪುಸ್ತಕದ ಆರಂಭದಲ್ಲಿ ಲಕ್ಷ್ಮೀಶನಿಗೆ ದೊರೆತ ವಾತಾವರಣವನ್ನು ಕುರಿತು ಹೇಳಲಾಗಿತ್ತು. ಕೀರ್ತನ ಸಾಹಿತ್ಯ ತನ್ನ ನಾದ ವೈವಿಧ್ಯ ಹಾಗೂ ಭಾವದ ಬಂಧುರತೆಗಳಿಂದ ಕನ್ನಡ ನಾಡನ್ನೆಲ್ಲ ಮರುಳುಗೊಳಿಸಿದ್ದ ಕಾಲ ಅದು. ಆ ಕಾಲದ ತಂಬೂರಿಯ ಶ್ರುತಿಗೆ, ವಿಧವಿಧವಾದ ಕೀರ್ತನೆಗಳ ಮಂಜುಳಲಯಗಳಿಗೆ ಶ್ರುತಿಗೊಂಡಿದ್ದ ಕವಿ ಲಕ್ಷ್ಮೀಶನದು. ಸಾಲದುದಕ್ಕೆ ಆ ವೇಳೆಗಾಗಲೆ ಕವಿಗಳು ಷಟ್ಪದಿಯ ಲಯ, ಶಕ್ತಿ ಸಾಧ್ಯತೆಗಳನ್ನು ಬಹಳ ಸಮರ್ಥ ರೀತಿಯಲ್ಲಿ ಗುರುತಿಸಿಕೊಂಡಿದ್ದರು. ರಾಘವಾಂಕ ವಾರ್ಧಕ ಷಟ್ಪದಿಯನ್ನು ತನ್ನ ನಾಟಕೀಯ ಪ್ರತಿಭೆಗೆ ಹೂಡಿಕೊಂಡಂತೆ ಲಕ್ಷ್ಮೀಶ ಈ ವಾರ್ಧಕ ಷಟ್ಪದಿಯನ್ನು ತನ್ನ ನಾದಲೋಲ ಪ್ರತಿಭೆಗೆ ಬಳಸಿಕೊಂಡನು. ಕಾವ್ಯದ ಆರಂಭದಲ್ಲಿ ಕವಿ ಮಾಡಿರುವ ಸರಸ್ವತಿಯ ಪ್ರಾರ್ಥನೆಯನ್ನು ನೋಡಬೇಕು.

ಭೂವ್ಯೋಮ ಪಾತಾಳ ಲೋಕಂಗಳಲ್ಲಿ ಸಂ
ಭಾವ್ಯರೆಂದೆನಿಸಿಕೊಳ್ವಖಿಳ ದೇವರ್ಕಳಿಂ